# ರಾವಬಹದ್ದೂರರ ಗ್ರಾಮಾಯಣ

ಕನ್ನಡ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಾದರಪಡಿಸಿದ ನಿಬಂಧ

ಸಂಶೋಧಕರು

**ಶ್ರೀಮತಿ ಕೆ.ಬಿ.ಪುಷ್ಪಲತಾ**

ಮಾರ್ಗದರ್ಶಕರು

**ಪ್ರೊ. ಮ .ರಾಮಕೃಷ್ಣ**



ಕರ್ನಾಟಕ ಸಂಘ (ರಿ), ಮಂಡ್ಯ

ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿಶ್ವ ವಿದ್ಯಾನಿಲಯದ ಮಾನ್ಯತೆ ಪಡೆದಿದೆ)




2008–09

# ರಾವಬಹದ್ದೂರರ ಗ್ರಾಮಾಯಣ

ಕನ್ನಡ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಾದರಪಡಿಸಿದ ನಿಬಂಧ

ಸಂಶೋಧಕರು

**ಶ್ರೀಮತಿ ಕೆ.ಬಿ.ಪುಷ್ಪಲತಾ**



ಮಾರ್ಗದರ್ಶಕರು

**ಪ್ರೊ. ಮ .ರಾಮಕೃಷ್ಣ**



ಕರ್ನಾಟಕ ಸಂಘ (ರಿ), ಮಂಡ್ಯ

ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿಶ್ವ ವಿದ್ಯಾನಿಲಯದ ಮಾನ್ಯತೆ ಪಡೆದಿದೆ)

2008–09

## ಮಾರ್ಗದರ್ಶಕರ ಪ್ರಮಾಣ ಪತ್ರ

**"ರಾವಬಹದ್ದೂರರ ಗ್ರಾಮಾಯಣ"** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್.ಪದವಿಗಾಗಿ ಶ್ರೀಮತಿ ಕೆ.ಟಿ.ಪುಷ್ಪಲತಾ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮ ರಾಮಕೃಷ್ಣ

ಸ್ಥಳ : ಮಂಡ್ಯ
ದಿನಾಂಕ : ೨೦-೦೯-೨೦೦೯

**ಪ್ರೊ. ಮ.ರಾಮಕೃಷ್ಣ**
ಕನ್ನಡ ಪ್ರಾಧ್ಯಾಪಕರು
ಭಾರತಿ ಕಾಲೇಜು
ಭಾರತಿ ನಗರ.

## ಸಂಶೋಧಕರ ಪ್ರಮಾಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಯುತ್ತಿರುವ ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ೨೦೦೮-೦೯ ನೇ ಸಾಲಿಗೆ ಕನ್ನಡ ಎಂ.ಫಿಲ್ ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **"ರಾವಬಹದ್ದೂರರ ಗ್ರಾಮಾಯಣ"** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಪ್ರೊ. ಮ.ರಾಮಕೃಷ್ಣರವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ, ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವುದೇ ಗ್ರಂಥ ಅಥವಾ ನಿಯತ ಕಾಲಿಕೆಗಳಲ್ಲಿ ಪ್ರಕಟಿಸಿರುವುದಿಲ್ಲ. ಕನ್ನಡ ವಿಶ್ವ ವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಸಲ್ಲಿಸುತ್ತಿದ್ದೇನೆ.

ಸ್ಥಳ : ಮಂಡ್ಯ
ದಿನಾಂಕ : ೨೦-೦೯-೨೦೦೯

**(ಶ್ರೀಮತಿ ಕೆ.ಟಿ.ಪುಷ್ಪಲತಾ)**
ಸಂಶೋಧನ ವಿದ್ಯಾರ್ಥಿ
ಕರ್ನಾಟಕ ಸಂಘ (ರಿ) ಮಂಡ್ಯ
ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ.

## ಪರಿವಿಡಿ

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಆಧುನಿಕ ಕನ್ನಡ ಸಾಹಿತ್ಯದಲ್ಲಿ 'ಕಾದಂಬರಿ'ಯು ಅತ್ಯಂತ ಜನಪ್ರಿಯ ಹಾಗೂ ಪ್ರಭಾವಶಾಲಿಯಾದ ಸಾಹಿತ್ಯ ಪ್ರಕಾರಗಳಲ್ಲಿ ಒಂದು. ಈ ಸಾಹಿತ್ಯ ಪ್ರಕಾರವು ಜನಸಾಮಾನ್ಯರ ಆಶೋತ್ತರ, ಅಭಿರುಚಿ, ಸಂಸ್ಕೃತಿಯ ಮಟ್ಟವನ್ನು ವಿವರವಾಗಿ ಪ್ರತಿಬಿಂಬಿಸುವ ಮಾಧ್ಯಮವಾಗಿದೆ. ಹೊಸಗನ್ನಡದಲ್ಲಿ ಇಂಗ್ಲಿಷ್ ಸಾಹಿತ್ಯ ಪ್ರಭಾವದಿಂದ ಭಾವಗೀತೆ, ಸಣ್ಣಕತೆ, ಜೀವನಚರಿತ್ರೆ, ಆತ್ಮಚರಿತ್ರೆ, ಪ್ರವಾಸಸಾಹಿತ್ಯ, ಮೊದಲಾದ ಸಾಹಿತ್ಯದ ಹೊಸ ಪ್ರಕಾರಗಳು ಹುಟ್ಟಿದಂತೆ ಇಂಗ್ಲಿಷಿನ 'ನಾವೆಲ್' ಎಂಬ ಪ್ರಕಾರ ಕಾದಂಬರಿ ಎಂಬ ಹೆಸರಿನಿಂದ ಪ್ರಚುರವಾಯಿತು.

ಪ್ರತಿಯೊಂದು ಸಾಹಿತ್ಯವೂ ಕೂಡ ಅಂದಂದಿನ ಸಮಕಾಲೀನ ಜೀವನವನ್ನು ಪ್ರತಿಬಿಂಬಿಸುತ್ತದೆ. ಬರಿ ಬಿಂಬಿಸುವುದಷ್ಟೇ ಅಲ್ಲ; ಬದಲಾವಣೆಯ ಆಶಯವನ್ನು ಕೂಡ ಒಳಗೊಂಡಿರುತ್ತದೆ. ಇಂತಹ ಸಾಹಿತ್ಯ ಕೃತಿಗಳು ಅಂದಂದಿನ ಕಾಲಮಾನದ ಜನಜೀವನದ ಎಲ್ಲ ಮುಖಗಳನ್ನು ಒಳಗೊಂಡಿರುತ್ತದೆ. ಸಮಗ್ರವಾಗಿ ಅಲ್ಲದಿದ್ದರೂ ಕೆಲವೊಂದು ಅಂಶಗಳನ್ನು ಬರೀ ಉಲ್ಲೇಖಗಳಿಂದಲೋ ಇಲ್ಲವೇ ಅಲ್ಲಲ್ಲಿ ಕೃತಿಗಳಲ್ಲಿನ ಪಾತ್ರಗಳಿಂದಲೋ, ವ್ಯಂಗ್ಯದಿಂದ ಇಲ್ಲವೇ ಮೌನವಾಗಿ ಎಲ್ಲವನ್ನೂ ಒಪ್ಪಿಕೊಳ್ಳುವುದರಿಂದಲೋ ಒಟ್ಟಿನಲ್ಲಿ ಆಯಾ ಜನಜೀವನವನ್ನು ಪ್ರಾದೇಶಿಕತೆಯನ್ನು ಬಿಂಬಿಸುತ್ತವೆ.

ಇಪ್ಪತ್ತನೆಯ ಶತಮಾನದ ಪ್ರಮುಖ ಕಾದಂಬರಿಕಾರರಲ್ಲಿ ರಾವಬಹದ್ದೂರರು ಕೂಡ ಒಬ್ಬರು. ಕನ್ನಡದಲ್ಲಿ ನವ್ಯ ಚಳುವಳಿ ಅತ್ಯಂತ ಭರಾಟೆಯಲ್ಲಿದ್ದ ಕಾಲದಲ್ಲಿ ರಾವಬಹದ್ದೂರರು ಕನ್ನಡ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದರು. ಇದಕ್ಕಿಂತ ಮೊದಲು ಇವರು ಪತ್ರಿಕೋದ್ಯಮಿಗಳಾಗಿದ್ದು, ನಿರಂತರ ಬರವಣಿಗೆಯಲ್ಲಿ ತೊಡಗಿಸಿಕೊಂಡವರು. ಪತ್ರಿಕಾವ್ಯವಸಾಯ ಅವರಿಗೆ ರಕ್ತಗತವಾಗಿ ಹೋಗಿತ್ತು. ಈ ಅವಧಿಯಲ್ಲಿ ಅನೇಕ ವೃತ್ತಿಗಳಲ್ಲಿ, ವಿವಿಧ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡಿದ್ದ ರಾವಬಹದ್ದೂರರ ಅನುಭವ, ಜ್ಞಾನ, ವೈಶಾಲ್ಯದ ಗುಟ್ಟು ಇವರ ಸಾಹಿತ್ಯದಲ್ಲಿ ಒಡಮೂಡಿರುವುದು ಗಮನಾರ್ಹ ಸಂಗತಿ.

ರಾವಬಹದ್ದೂರರು ಮೂರು ದಶಕಗಳುದ್ದಕ್ಕೂ ಸಾಹಿತ್ಯದಲ್ಲಿ ಸೇವೆ ಸಲ್ಲಿಸಿದ್ದರೂ ಯಾವುದೇ ಗುಂಪಿಗೆ ಸೇರಿಕೊಂಡಾಗಲಿ, ತಮ್ಮದೇ ಆದ ಗುಂಪು ಕಟ್ಟಿಕೊಂಡಾಗಲಿ ಬಾಳಿದವರಲ್ಲ. ತಾವಾಗಿ ಮುಂದೆ ಬಂದು ಹಕ್ಕು ಸ್ಥಾಪಿಸಿದವರೂ ಅಲ್ಲ. ಜೀವನದುದ್ದಕ್ಕೂ ಎದುರಾದ ಸಮಸ್ಯೆಗಳಿಂದ ದೂರ ಉಳಿದವರೂ ಅಲ್ಲ. ಪತ್ರಿಕೋದ್ಯಮ, ಕೃಷಿ, ಸಮಾಜಸೇವೆ,

ಸ್ವಾತಂತ್ರ್ಯ ಹೋರಾಟ, ಸಾಹಿತ್ಯ ರಚನೆ ಹೀಗೆ ನಾನಾ ಕ್ಷೇತ್ರಗಳಲ್ಲಿ ತಮ್ಮನ್ನು ನಿರಂತರವಾಗಿ ತೊಡಗಿಸಿಕೊಂಡವರು.

ಸಣ್ಣಕತೆ, ಕಾದಂಬರಿ ಪ್ರವಾಸಕಥನ, ಪ್ರಬಂಧ ಸಾಹಿತ್ಯ ಮೊದಲಾದ ಪ್ರಕಾರಗಳಲ್ಲಿ ಕೃತಿರಚನೆ ಮಾಡಿ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆಯನ್ನು ಸಲ್ಲಿಸಿದ್ದಾರೆ. ರಾವಬಹದ್ದೂರರು ಬರೆದ ಮೊದಲ ಕಾದಂಬರಿ 'ಗ್ರಾಮಾಯಣ'. ಇದು ಭಾರತೀಯ ಸಾಹಿತ್ಯಕ್ಕೆ ಕನ್ನಡದ ವಿಶಿಷ್ಟ ಕೊಡುಗೆ ಎನ್ನಬಹುದು. ಯಾವುದೇ ಲೇಖಕನೊಬ್ಬನ ಚೊಚ್ಚಲ ಕೃತಿಯೊಂದು ಈ ಬಗೆಯ ಗೌರವ, ಹೆಗ್ಗಳಿಕೆಯನ್ನು ಪಡೆದಿರುವುದು ಅಪರೂಪದ ಘಟನೆ.

ಪ್ರೇಮ-ಕಾಮ ಒಂದೇ ಮನುಷ್ಯನನ್ನು ಕಾಡುವ ಸಮಸ್ಯೆ ಅಲ್ಲ. ಅವನನ್ನು ಕಾಡುವ ಅನಂತ ಸಮಸ್ಯೆಗಳಿವೆ: ಅವನ್ನು ಅಭಿವ್ಯಕ್ತಗೊಳಿಸುವ ಉದ್ದೇಶದಿಂದಲೇ ರಾವಬಹದ್ದೂರ ಅವರು 'ಗ್ರಾಮಾಯಣ' ಕಾದಂಬರಿಯನ್ನು ರಚಿಸಿದ್ದಾರೆ. ಹೆಸರೇ ಹೇಳುವಂತೆ 'ಗ್ರಾಮ'ವೇ ಈ ಕಾದಂಬರಿಯ ಕೇಂದ್ರವಸ್ತು. ಗ್ರಾಮಾಯಣದಲ್ಲಿ ಹಳ್ಳಿಯ ನೂರು ಮುಖಗಳ ಚಿತ್ರಣವಿದ್ದು, ಇಡೀ ಹಳ್ಳಿಯೇ ಅಲ್ಲಿ ಸಾಕಾರಗೊಂಡಿದೆ. ಬಿಜಾಪುರ ಜಿಲ್ಲೆಯ ಕೃಷ್ಣಾನದಿ ದಂಡೆಯ ಮೇಲಿನ ಪಾದಳ್ಳಿ ಗ್ರಾಮದ ಅರವತ್ತು ವರ್ಷಗಳಷ್ಟು ಹಿಂದಿನ ಜೀವನ 'ಗ್ರಾಮಾಯಣ'ದಲ್ಲಿ ಚಿತ್ರಣಗೊಂಡಿದೆ. ಇದೊಂದು ಜೀವನ ಕಥಾಮಾಲೆ: ದುಃಖದ ನೀಳ್ಗತೆ. ಸುಮಾರು ಆರುನೂರು ಪುಟಗಳಷ್ಟು ವಿಸ್ತಾರವಾಗಿರುವ ಈ ಕಾದಂಬರಿಯಲ್ಲಿ ಎಂಬತ್ತಕ್ಕೂ ಮಿಕ್ಕ ಪಾತ್ರಗಳೂ ಕಾಣಿಸಿಕೊಳ್ಳುತ್ತವೆ. ಪ್ರಾದೇಶಿಕತೆಯ ಸೊಗಡಿನಿಂದ ಕೂಡಿರುವ ಈ ಕಾದಂಬರಿಯಲ್ಲಿ ಮಾನವ ಸ್ವಭಾವದ ವಿವಿಧ ಮುಖಗಳು ಅನಾವರಣಗೊಂಡಿದೆ. ರಾವಬಹದ್ದೂರರಿಗಿದ್ದ ಅಂತರಂಗದ ಸಂಸ್ಕಾರ, ಕವಿದೃಷ್ಟಿ ಮತ್ತು ತಾತ್ವಿಕ ಶಕ್ತಿಗಳಿಗೆ 'ಗ್ರಾಮಾಯಣ' ಸಾಕ್ಷಿಯಾಗಿದೆ.

ಒಂದು ಸಾಹಿತ್ಯ ಕೃತಿಯು ಏನಾಗಿದೆ ಎನ್ನುವುದಕ್ಕಿಂತ ಓದುಗನ ಅಂತರಂಗದಲ್ಲಿ ಅದು ಏನು ಪರಿಣಾಮ ಉಂಟು ಮಾಡುತ್ತದೆ ಎನ್ನುವುದು ಹೆಚ್ಚು ಮುಖ್ಯವಾದುದು. ಒಂದು ಕೃತಿಗೆ ಎಷ್ಟು ಓದುಗರಿರುವರೋ ಅಷ್ಟು ಅರ್ಥಾವತಾರಗಳಿವೆ. ಓದುಗರಿಂದ ಪ್ರತ್ಯೇಕವಾದ ಅರ್ಥವೊಂದು ಇಲ್ಲವೇ ಇಲ್ಲ. ಗಟ್ಟಿ ಮುಟ್ಟಾದ ಕಥನದ ನೆರವಿನಿಂದ ಕಥೆ, ಕಾದಂಬರಿಗಳೆರಡೂ ಓದುಗರೊಡನೆ ನಿರಂತರ ಸಂವಾದ ನಡೆದಾಗ ಮಾತ್ರ ಆ ಕೃತಿ ಉಳಿಯಲು ಸಾಧ್ಯವಾಗುತ್ತದೆ. ಮರು ಓದಿಗೆ ಒಳಪಡುವುದರಿಂದ ಹೊಸ ಹೊಸ ಆಲೋಚನೆಗಳು, ವಿಚಾರಗಳು ಹೊಳೆಯುತ್ತಾ ಹೋಗುತ್ತವೆ.

ಕನ್ನಡ ಸಾಹಿತ್ಯದಲ್ಲಿ 'ಗ್ರಾಮಾಯಣ' ಕಾದಂಬರಿಯು ವಿಶೇಷ ಸ್ಥಾನ ಗಳಿಸಿರುವುದರಿಂದ ಇದರ ಬಗ್ಗೆ ಹಲವು ಉತ್ತಮ ವಿಮರ್ಶಾಲೇಖನಗಳು ಬಂದಿವೆ. ಹಲವಾರು ಕಾರಣಗಳಿಗಾಗಿ ವಿಮರ್ಶಕರು ಈ ಕಾದಂಬರಿಯನ್ನು ಮೆಚ್ಚಿ ಭಿನ್ನ ನೆಲೆಗಳಲ್ಲಿ ಅಧ್ಯಯನ ಮಾಡಿದ್ದಾರೆ. ೧೯೭೦ ರಲ್ಲಿ ಪ್ರಕಟವಾದ 'ಗ್ರಾಮಾಯಣ ಸಮೀಕ್ಷೆ' ಈ ಕಾದಂಬರಿಯ ಯಶಸ್ಸನ್ನು ಸಾರುವ ಒಂದು ಮೈಲಿಗಲ್ಲಾಗಿದೆ. ಆದಾಗ್ಯೂ ಕೂಡ ಯಾವುದೇ ಒಬ್ಬ ಸಾಹಿತಿ ಕಾಲಕಾಲಕ್ಕೆ ಭಿನ್ನ ವ್ಯಾಖ್ಯಾನಗಳಿಗೆ ಮತ್ತು ಅಧ್ಯಯನಗಳಿಗೆ ತನ್ನನ್ನು ಸಹಜವಾಗಿಯೇ ಒಡ್ಡಿಕೊಳ್ಳುತ್ತಾನೆಂಬುದನ್ನು ಲಕ್ಷಿಸಬೇಕು. ಒಂದು ಕೃತಿ ಎಷ್ಟೇ ಶ್ರೇಷ್ಠವಾಗಿದ್ದರೂ ಓದುಗರಿಲ್ಲದಿದ್ದರೆ ಅದು ಕಾಲ ಕಳೆದಂತೆ ಮರೆತು ಹೋಗುವ ಸಾಧ್ಯತೆಗಳೇ ಹೆಚ್ಚು. ಆದ್ದರಿಂದ ಪ್ರತಿಯೊಂದು ಕೃತಿಯು ಪುನರ್ ಓದಿಗೆ, ಪುನರ್ ವಿವೇಚನೆಗೆ ಒಳಪಡಬೇಕೆಂಬ ಉದ್ದೇಶದಿಂದ ಈ ಅಧ್ಯಯನವನ್ನು ಕೈಗೆತ್ತಿಕೊಂಡಿದ್ದೇನೆ.

**'ರಾವ ಬಹದ್ದೂರರ ಗ್ರಾಮಾಯಣ'** ಎಂಬ ಶೀರ್ಷಿಕೆಯಡಿಯಲ್ಲಿ ಈ ಅಧ್ಯಯನ ಕೈಗೊಳ್ಳಲಾಗಿದೆ. 'ಗ್ರಾಮಾಯಣ' ಕಾದಂಬರಿಯ ಒಟ್ಟು ಅಧ್ಯಯನ ಇದಾಗಿದ್ದು, ಕಾದಂಬರಿಯ ಕಥಾವಸ್ತು, ಪಾತ್ರಚಿತ್ರಣ, ಸನ್ನಿವೇಶ ಚಿತ್ರಣ, ಕಾದಂಬರಿಯಲ್ಲಿ ಬರುವ ಸಾಮಾಜಿಕ ಮತ್ತು ಸಾಂಸ್ಕೃತಿಕ ಚಿತ್ರಣ, ಅದರ ತಂತ್ರ ವಿನ್ಯಾಸ, ಅಲ್ಲಿ ಬಳಸಿರುವ ಭಾಷಾಶೈಲಿ, ಕಾದಂಬರಿಯ ಧೋರಣೆ ಇದೆಲ್ಲವರ ಬಗೆಗೂ ಸಾಕಷ್ಟು ವಿವರವಾಗಿ ಚರ್ಚಿಸಲಾಗಿದೆ. ಈ ಮೊದಲೇ ಹೇಳಿದಂತೆ ರಾವಬಹದ್ದೂರರ 'ಗ್ರಾಮಾಯಣ' ಕಾದಂಬರಿಯ ಬಗೆಗೆ ಈಗಾಗಲೇ ಸಾಕಷ್ಟು ಅಧ್ಯಯನಗಳು, ವಿಮರ್ಶೆಗಳು ನಡೆದಿರುವುದರಿಂದ ಪ್ರಸ್ತುತ ಅಧ್ಯಯನ ಅವುಗಳ ಮರುಧ್ವನಿ ಮಾತ್ರವಾಗುವುದನ್ನು ತಡೆದು ಹಿಂದಿನ ವಿಮರ್ಶೆಗಳು ತಲುಪಿರುವ ನೆಲೆಗಳನ್ನು ಸಾಧ್ಯವಾದ ಮಟ್ಟಿಗೆ ಗ್ರಹಣ ಮಾಡಿಕೊಂಡು ಅವುಗಳ ಮುಂದುವರಿಕೆ ಇದಾಗುವಂತೆ ನೋಡಿಕೊಳ್ಳಲಾಗಿದೆ.

# ಅಧ್ಯಾಯ-೧

## ರಾಮಚಂದ್ರ ಭೀಮರಾವ್ ಕುಲಕುರ್ಣಿಯವರ ಬದುಕು-ಬರಹ

**"ರಾವಬಹದ್ದೂರ"** ಎಂಬ ಕಾವ್ಯನಾಮದಿಂದ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಪ್ರಸಿದ್ಧರಾದ ರಾಮಚಂದ್ರಭೀಮರಾವ್ ಕುಲಕುರ್ಣಿಯವರದು ವೈವಿಧ್ಯಮಯವಾದ ಬದುಕು. ಸ್ವಾತಂತ್ರ್ಯ ಹೋರಾಟಗಾರರಾಗಿ, ಸಮಾಜಸೇವಕರಾಗಿ ಪ್ರತಿಕೋದ್ಯಮಿಗಳಾಗಿ ಮತ್ತು ಕೃಷಿಕರಾಗಿಯೂ ಅವರು ಮಾಡಿದ ಸೇವೆ ಸ್ಮರಣೀಯವಾದುದು.

ಕುಲಕರ್ಣಿಯವರು ಬಿಜಾಪುರ ಜಿಲ್ಲೆಯ ಜಮಖಂಡಿ ತಾಲ್ಲೂಕು ಕೃಷ್ಣಾನದಿ ತೀರದಲ್ಲಿರುವ ಹಿರೇಪಡಸಲಗಿ ಎಂಬಲ್ಲಿ ೨೪-೦೯-೧೯೧೦ ರಲ್ಲಿ ಜನಿಸಿದರು. ತಂದೆ ಭೀಮರಾವ್ ಕುಲಕರ್ಣಿ, ತಾಯಿ ಸುಭದ್ರಾದೇವಿ. ಅವರದು ಸಾಮಾನ್ಯ ಕೃಷಿ ಕುಟುಂಬವಾದ್ದರಿಂದ ಉದ್ದಕ್ಕೂ ಬಡತನದಲ್ಲಿಯೇ ಬೆಳೆಯಬೇಕಾಯಿತು. ಅಹಿಂಸೆಯ ಮೂರ್ತಿಯಂತಿದ್ದ ಅವರ ಅಜ್ಜಿಯ ಪ್ರಭಾವ ಮುಂದೆ ಗಾಂಧೀಜಿಯ ಪ್ರಭಾವಕ್ಕೆ ಒಳಗಾಗಲು ಕಾರಣವಾಯಿತು. ಕುಲಕರ್ಣಿಯವರ ತಂದೆ ಪಂಡರಪುರದ 'ವಾರಕರಿಪಂಥ'ಕ್ಕೆ ಸೇರಿದ್ದರು. ಎಲ್ಲರೂ ಸಮಾನರು ಎಂಬುದು ಈ ಪಂಥದ ಮುಖ್ಯ ಧ್ಯೇಯ. ಹೀಗಾಗಿ ಕುಲಕರ್ಣಿಯವರಲ್ಲಿ ಚಿಕ್ಕಂದಿನಲ್ಲಿಯೇ ಸಮತಾಭಾವನೆ ಸಹಜವಾಗಿ ಬೆಳೆಯಿತು. ಪ್ರತಿದಿನ ಸಂಜೆ ಸಮಯದಲ್ಲಿ ಅವರ ಗ್ರಾಮದಲ್ಲಿ ಪುರಾಣ ಹೇಳುತ್ತಿದ್ದ ಬಾಳಾಚಾರ್ಯರಿಂದ ಸಾಹಿತ್ಯದಲ್ಲಿ ಆಸಕ್ತಿ ಬೆಳೆಸಿಕೊಂಡರು. ಬಾಲ್ಯದಲ್ಲಿ ಈ ಬಗ್ಗೆಯ ಪ್ರಭಾವಗಳಿಗೆ ಒಳಗಾದ ಅವರು ದೇಶಪ್ರೇಮವನ್ನು ಮೈಗೂಡಿಸಿಕೊಂಡು ಬೆಳೆದರು.

ಮನೆಯ ಆರ್ಥಿಕ ತೊಂದರೆಗಳಿಂದಾಗಿ ಶಾಲಾಶಿಕ್ಷಣವನ್ನು ಬಹುಕಷ್ಟದಿಂದ ಪಡೆದವರು. ಇವರ ಪ್ರಾಥಮಿಕ ಶಿಕ್ಷಣ ಹಿರೇಪಡಸಲಗಿಯಲ್ಲಿ, ಪ್ರೌಢಶಿಕ್ಷಣ ಹಿರೆಕೆರೂರು. ಕಾಲೇಜು ಶಿಕ್ಷಣ ಕರ್ನಾಟಕ ಕಾಲೇಜು ಧಾರವಾಡದಲ್ಲಿ ನಡೆಯಿತು. ಕಾಲೇಜು ಫೀ ಕಟ್ಟಲೂ ಕೈಲಾಗದಷ್ಟು ಆರ್ಥಿಕ ದುಸ್ಥಿತಿಯಿಂದಾಗಿ ವಿದ್ಯಾರ್ಥಿ ಜೀವನದಲ್ಲೇ ಓದಿನ ಜೊತೆಗೆ ಬ್ಯಾಂಕೊಂದರಲ್ಲಿ ಬಿಡುವಿನ ವೇಳೆಯಲ್ಲಿ ನೌಕರಿ ಮಾಡುತ್ತ ಬಿ.ಎ. ಪದವಿ ಪಡೆದುಕೊಂಡರು. ಅಷ್ಟರವೇಳೆಗೆ ಗಾಂಧೀಜಿಯವರು ಆರಂಭಿಸಿದ್ದ ಸ್ವಾತಂತ್ರ್ಯ ಸಂಗ್ರಾಮದ ಬಿರುಗಾಳಿ ದೇಶದ ತುಂಬ ಬೀಸುತ್ತಿತ್ತು. ಅದರ ಪ್ರಭಾವಕ್ಕೊಳಗಾದ ಕುಲಕರ್ಣಿಯವರೂ ದೇಶಸೇವೆಗೆ ತಮ್ಮನ್ನು ತೊಡಗಿಸಿಕೊಂಡು ೧೯೪೩ ರಿಂದ ೧೯೪೬ ರವರೆಗೆ ಕರ್ನಾಟಕ ಚರಕ ಸಂಘದ ಕರ್ನಾಟಕ ಶಾಖೆಯಲ್ಲಿ ಸೇವೆಗೆ ಸೇರಿ ಖಾದಿ ಉತ್ಪಾದನೆ ಮತ್ತು ಪ್ರಚಾರ ಕೆಲಸವನ್ನು ಬಹುಶ್ರದ್ಧೆಯಿಂದ ಮಾಡಿದರು. ೧೯೪೪ ರಲ್ಲಿ ತಮ್ಮೂರಿಗೆ ಹಿಂದಿರುಗಿ

ಖಾದಿ ಪ್ರಚಾರದ ಜೊತೆಗೆ ಕೃಷಿ ಕೆಲಸಗಳನ್ನು ಮಾಡಿದರು. ಗ್ರಾಮಾಂತರ ಜನರ ಬದುಕು ಹಸನಾಗಬೇಕು ಎಂಬ ಹಂಬಲವನ್ನಿಟ್ಟುಕೊಂಡಿದ್ದ ಅವರು ಅದಕ್ಕಾಗಿ ಬಗೆಬಗೆಯ ಪ್ರಯತ್ನಗಳನ್ನು ನಡೆಸಿದರು.

ಅಂದಿನ ದಿನಗಳಲ್ಲಿ 'ಪತ್ರಿಕೋದ್ಯಮ' ದೇಶ ಸೇವೆಯ ಇನ್ನೊಂದು ದಾರಿ ಆಗಿತ್ತು. ರಾಷ್ಟ್ರಾಭಿಮಾನವನ್ನು ಮೈಗೂಡಿಸಿಕೊಂಡಿದ್ದ ಕುಲಕರ್ಣಿಯವರು ಪತ್ರಿಕೋದ್ಯಮಿಯಾಗಿಯೂ ಕನ್ನಡ ಪತ್ರಿಕೋದ್ಯಮಕ್ಕೆ ಸಲ್ಲಿಸಿದ ಸೇವೆ ಮಹತ್ವದ್ದು. ಕನ್ನಡ ಪತ್ರಿಕೋದ್ಯಮ ಇನ್ನೂ ಶೈಶವಾವಸ್ಥೆಯಲ್ಲಿದ್ದ ಸ್ವಾತಂತ್ರ್ಯ ಪೂರ್ವ ಕಾಲದಲ್ಲಿ ಸರ್ಕಾರದ ವಕ್ರದೃಷ್ಟಿಗೆ ತುತ್ತಾಗಿ ಇಡೀ ಪತ್ರಿಕಾ ಕಛೇರಿ, ಮುದ್ರಣಾಲಯಗಳಿಗೆ ಬೀಗಮುದ್ರೆ ಹಾಕಿ, ಸಂಪಾದಕರನ್ನು ಸೆರೆಹಿಡಿದು ಯಾವಾಗ ಜೈಲಿಗೆ ಕಳಿಸುವರೋ ಎಂಬ ಭಯದಲ್ಲಿಯೇ ಕೆಲಸ ಮಾಡಬೇಕಾಗಿತ್ತು. ಅಂಥ ದಿನಗಳಲ್ಲಿ ಇವರು ಪತ್ರಿಕೋದ್ಯಮಿಯಾಗಿ ಕೆಲಸ ಮಾಡಿದವರು. ಮೊದಲು ಬೆಟಗೇರಿ ಕೃಷ್ಣಶರ್ಮರ 'ಜಯಂತಿ' ಮಾಸಪತ್ರಿಕೆಯಲ್ಲಿ ಸ್ವಲ್ಪ ಕಾಲ ಕೆಲಸ ಮಾಡಿದ್ದಾರೆ. ನಂತರ ೧೯೪೭ ರಿಂದ ೧೯೬೦ ರವರೆಗೆ ಸಂಯುಕ್ತ ಕರ್ನಾಟಕ ಪತ್ರಿಕೆಯ ಸಹಸಂಪಾದಕರಾಗಿ ದುಡಿದಿದ್ದಾರೆ. ಅವರು ಸಂಯುಕ್ತ ಕರ್ನಾಟಕದಲ್ಲಿ ಬರೆಯುತ್ತಿದ್ದ 'ಅಗ್ರಲೇಖನ' ಮೊನಚು ಮತ್ತು ವಿಡಂಬನೆಗೆ ಹೆಸರಾಗಿದ್ದವು. ಈ ಪತ್ರಿಕೆಯನ್ನು ಬಿಟ್ಟ ಬಳಿಕ ರಾವ ಬಹದ್ದೂರರು ಇನ್ನಿತರ ಒಂದೆರಡು ಪತ್ರಿಕೆಗಳ ಸಂಪಾದಕತ್ವವನ್ನು ವಹಿಸಿಕೊಂಡರಾದರೂ ಹೆಚ್ಚುಕಾಲ ಅಲ್ಲಿ ನಿಲ್ಲಲಿಲ್ಲ. ಇವರು ನಿಷ್ಠಾವಂತ ಗಾಂಧಿವಾದಿ. ಗಾಂಧೀಜಿಯ ಪ್ರಭಾವಕ್ಕೊಳಗಾಗಿ ಅವರ ರಚನಾತ್ಮಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು.

ಇವರು ಹುಟ್ಟು ರೈತರು. ಒಕ್ಕಲುತನ ಇವರ ಕುಟುಂಬದ ವೃತ್ತಿ. ರೈತರಾಗಿ ಹುಟ್ಟಿ ಮಣ್ಣಿನಲ್ಲೇ ದುಡಿಯುವ ಸಂಕಲ್ಪದಿಂದ ಇದ್ದ ರಾವಬಹದ್ದೂರ್‌ರವರು ಆಕಸ್ಮಿಕವಾಗಿ ಸಾಹಿತ್ಯ ಕೃಷಿಯಲ್ಲಿ ತೊಡಗಿಸಿಕೊಂಡರು. 'ನಾನೋ ಉತ್ತಿ ಬಿತ್ತುವ ಕೃಷಿಕನಾಗಿ ಜೀವಿಸುವವನು. ಭೂಮಿಯಲ್ಲಿ ಬಿತ್ತಿದ ಸಸಿ ಬೆಳೆಯುದನ್ನು ಕಂಡು ಸಂತಸ ಪಡುವವನು. ಸಾಹಿತ್ಯ ಕ್ಷೇತ್ರದಲ್ಲಿಯೂ ನನ್ನ ಸ್ಥಿತಿ ಭಿನ್ನವಲ್ಲ' ಎಂದು ಅವರೇ ಪ್ರಬಂಧವೊಂದರಲ್ಲಿ ಹೇಳಿಕೊಂಡಿದ್ದಾರೆ. ಯಾವುದೇ ಕೆಲಸಕ್ಕೆ ಸೇರಿದರೂ ಪೂರ್ಣ ಪ್ರಮಾಣದಲ್ಲಿ ಆ ಕಾರ್ಯದಲ್ಲಿ ತೊಡಗಿಸಿಕೊಳ್ಳುತ್ತಿದ್ದರು. ಆದ್ದರಿಂದ ಸಮಕಾಲೀನ ಸಾಹಿತ್ಯ ಕೃತಿಗಳ ಅಧ್ಯಯನ ತೀರಾ ಕಡಿಮೆ ಎಂದೇ ಹೇಳಬೇಕು. ಆದರೆ ಇವರು ಬದುಕಿನಿಂದ ಪಡೆದದ್ದು, ಅನುಭವಿಸಿದ್ದು ಅಪಾರ. ಕನ್ನಡ ಸಾಹಿತ್ಯಕ್ಕೆ ರಾವಬಹದ್ದೂರರು ಉತ್ತರ ಕರ್ನಾಟಕದ ಬದುಕು, ಜನಜೀವನ, ಪ್ರಾದೇಶಿಕ ಸೊಗಡನ್ನು ಕೊಟ್ಟಿರುವಂತೆ ಅಲ್ಲಿನ ವಿಶಿಷ್ಟ ಭಾಷೆ

ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯೋತ್ತರ ಭಾರತದ ಸ್ಥಿತಿಗತಿ. ಗಾಂಧೀಯುಗದ ಆದರ್ಶಗಳು. ಮೌಲ್ಯಗಳು ಹಾಗೂ ಗಾಂಧೀ ಅನಂತರ ಭಾರತ ಕಂಡ ಸ್ಥಿತ್ಯಂತರಗಳನ್ನು ಆಪ್ತರ್ಣೀಯ ಮೌಲ್ಯಗಳ ಹಿನ್ನೆಲೆಯಲ್ಲಿ ವಿವೇಚಿಸುವುದರ ಮೂಲಕ ಉದಾತ್ತ ಜೀವನದ ಸ್ಫೂರ್ತಿ ನೀಡಿದ್ದಾರೆ. ಇವರ ಸಾಹಿತ್ಯ ಕೃತಿಗಳಲ್ಲಿ ಸ್ಪಷ್ಟ ಮನಸ್ಸೊಂದು ಮಾನವ ಹಿತಕ್ಕಾಗಿ ಮಿಡಿಯುವುದನ್ನು ಎದ್ದುಕಾಣುತ್ತದೆ.

“ರಾವಬಹದ್ದೂರ ಕುಲಕರ್ಣಿಯವರು ಬದಲಾವಣೆ ಹೊಂದುತ್ತಿರುವ ಹಳ್ಳಿಗಳಲ್ಲಿನ. ಬೆಳೆಯುತ್ತಿರುವ ಪಟ್ಟಣಗಳಲ್ಲಿನ. ಜೀವಂತ ಸಮಸ್ಯೆಗಳ ಆಪ್ತ ವಿಮರ್ಶಕರಿವರು. ಇವರಿಗೆ ಗ್ರಾಮಾಂತರ ಜೀವನದ ಆಳದ ಸಂಕೀರ್ಣ ವಿವರಗಳಲ್ಲಿ ಕರಗತವಾಗಿರುವಂತೆ ತೋರುತ್ತದೆ. ಇವರ ವಸ್ತುನಿಷ್ಠೆ. ಪ್ರಾಮಾಣಿಕತೆ ಬೆರಗುಗೊಳಿಸುವಂತದ್ದು. ಇವರು ಕಂಡ. ಕೇಳಿ. ಕಾಣಿಸುವ. ಕೇಳಿಸುವ ಜನ ಇಲ್ಲಿನವರು: ಈ ನಾಡಿನ ಹಸಿರು. ಬಸಿರು. ಚೆಲುವು. ವಕ್ರತೆ, ಹೊಲಸು ಕೂಡ ಇವರ ಬರವಣಿಗೆಯಲ್ಲಿ ತಲೆಹಾಕಿದೆ”[1]

ಓದುವ ಹವ್ಯಾಸವನ್ನು ಚಿಕ್ಕಂದಿನಲ್ಲಿಯೇ ಬೆಳೆಸಿಕೊಂಡಿದ್ದ ಕುಲಕರ್ಣಿಯವರು ವಿದ್ಯಾರ್ಥಿ ದೆಸೆಯಲ್ಲಿಯೇ ಬರವಣಿಗೆಯನ್ನು ಆರಂಭಿಸಿದರು. ಅವರು ಬರೆದ ಮೊದಲ ಬರಹ ‘ರನ್ನೆಯೆ ದಯೆ ಮಾಡಿಲ್ಲಿಂದ’ ಎಂಬುದು ಒಂದು ಪ್ರೇಮ ಕವನ. ಅದು ಕರ್ನಾಟಕ ಕಾಲೇಜಿನ ಮಿಸಲೆನಿಯಲ್ಲಿ ಪ್ರಕಟವಾಯಿತು. ಅವರು ಬರೆದ ಮೊದಲ ಪುಸ್ತಕ ‘ಸಾಮ್ಯವಾದ’. ಇದು ಧಾರವಾಡದ ಮಿಂಚಿನ ಬಳ್ಳಿಯಿಂದ ಪ್ರಕಟವಾಯಿತು. ವಿದ್ಯಾರ್ಥಿ ದೆಸೆಯಿಂದಲೇ ಸಾಹಿತ್ಯ ರಚನೆಯಲ್ಲಿ ತೊಡಗಿಸಿಕೊಂಡ ಇವರು ತಮ್ಮ ಬದುಕಿನ ಬವಣೆಗಳನ್ನು ನೀಗಲು ಏಷ್ಟೋ ಅವಸರದ ಬರವಣಿಗೆಗಳನ್ನು ಮಾಡಿದರೆಂಬುದು ನಿಜ. ಆದರೆ ಎಂದೂ ನೈತಿಕ ಮೌಲ್ಯಗಳ ನೆಲಗಟ್ಟನ್ನು. ತಮ್ಮ ಜೀವನ ದೃಷ್ಟಿಯನ್ನೂ. ಗಾಂಧೀ ದರ್ಶನವನ್ನೂ. ಮಾನವೀಯ ಅನುಕಂಪವನ್ನು ತೊರೆದು ಅಗ್ಗದ ಜನಪ್ರಿಯತೆಗಾಗಿ ಬರೆಯಲಿಲ್ಲ. ಈ ದೃಷ್ಟಿಯಿಂದ ಇವರ ಕೃತಿಗಳು ಜೀವನಾನುಭವಗಳ ಮೂಸೆಯಲ್ಲಿ ಮೂಡಿ ಬಂದವು.

ಕಾದಂಬರಿಗಳ ಮೂಲಕ ತಮ್ಮ ಅಭಿವ್ಯಕ್ತಿಯನ್ನು ಕಂಡುಕೊಂಡ ರಾವಬಹದ್ದೂರರು ಬರೆದ ಮೊದಲ ಕಾದಂಬರಿ ‘ಗ್ರಾಮಾಯಣ’. ಇದು ಭಾರತೀಯ ಸಾಹಿತ್ಯಕ್ಕೆ ಕನ್ನಡದ ವಿಶಿಷ್ಟ ಕೊಡುಗೆ ಎನ್ನಬಹುದು.

ಇದಲ್ಲದೆ ಸೂಜಿಗಲ್ಲು. ಚಿತ್ತಿಚಿಳಿದವರು (೧೯೭೨). ಧೂಮಕೇತು (೧೯೭೨). ಮುತ್ತು ಕಟ್ಟಿದವಳು (೧೯೭೬). ಕನಸು ನನಸು (೧೯೭೪). ಬಾಳಬಂಗಾರ (೧೯೭೪). ಕಾಂಚನಮೃಗ (೧೯೭೫). ವೃಂದಾವನ. ತಬ್ಬಲಿಗಳು ಇವು ರಾವಬಹದ್ದೂರರ ಇತರ

ಕಾದಂಬರಿಗಳು. 'ಸೂಜಿಗಲ್ಲು' ಕಾದಂಬರಿಯಲ್ಲಿ ತ್ಯಾಗ-ಸೇವಾ ಭಾವನೆಗಳು ಸೂಜಿಗಲ್ಲಿನಂತೆ ಜನರನ್ನು ಆಕರ್ಷಿಸುವ ದಿವ್ಯಶಕ್ತಿಯನ್ನು ಮನುಷ್ಯನಿಗೆ ನೀಡುವುದೆಂಬುದನ್ನು ಬ್ರಹ್ಮಚಾರಿ ನಾರಾಯಣನ ಮರಣಾನಂತರದ ಘಟನೆಗಳಿಂದ ಚಿತ್ರಿಸಿದ್ದಾರೆ. ದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ಸೇರಿದವರು ಪಟ್ಟ ಕಷ್ಟಗಳು. ಅವರು ಮಾಡಿದ ತ್ಯಾಗ-ಬಲಿದಾನ. ನಿಸ್ವಾರ್ಥ ಭಾವನೆಗಳಿಂದ ಬದುಕಿನಲ್ಲಿ ಸಂಘರ್ಷ ನಡೆಸುವವರ ಚಿತ್ರಣವನ್ನು 'ಕನಸು-ನನಸು'. 'ತಬ್ಬಲಿಗಳು'. 'ಜಿತ್ರಿಪಕ್ಕಿದವರು'. 'ಬೃಂದಾವನ'- ಈ ಕಾದಂಬರಿಗಳಲ್ಲಿ ಕಾಣುತ್ತೇವೆ. ಯಾವ ಜನತೆಯ ಸ್ವಾತಂತ್ರ್ಯಕ್ಕೆ ಹೋರಾಟ ನಡೆಸಲಾಯಿತೊ ಆ ಹೋರಾಟದ ಮುಂಚೂಣಿಯಲ್ಲಿದ್ದವರೇ ಸ್ವತಂತ್ರ ಭಾರತದಲ್ಲಿ ಅಧಿಕಾರದ ಗದ್ದುಗೆ ಹಿಡಿದು ಜನತೆಯ ಶೋಷಣೆಯನ್ನು ಅಬಾಧಿತವಾಗಿ ನಡೆಸಿದ್ದು ಈ ದೇಶದ ದುರಂತ ಎಂಬ ವಿಷಾದದ ದನಿಯನ್ನು ಬಿಟ್ಟಾರೆ ಇವರ ಎಲ್ಲಾ ಕಾದಂಬರಿಗಳಲ್ಲೂ ಕಾಣಬಹುದು. ಅನರ್ಹರಿಗೆ ಅಧಿಕಾರ ಪಟ್ಟ. ದುಡಿಯದೇ ಹಣ ಪಡೆಯುವ ದುರಾಸೆ. ದುಡ್ಡಿದ್ದರೆ ಎಲ್ಲವನ್ನೂ ಪಡೆಯಬಹುದು ಎಂಬ ಭ್ರಮೆಯಿಂದ ಧನಸಂಚಯ ಮಾಡುವವರ ನೈತಿಕ ಅಧೋಗತಿಯ ಚಿತ್ರಗಳನ್ನು 'ಧೂಮಕೇತು'. 'ಕಾಂಚನಮೃಗ'. 'ತಬ್ಬಲಿಗಳು' ಕೃತಿಗಳಲ್ಲಿ ಕಾಣಬಹುದು. ಪ್ರಜೆಗಳ ಹಿತಕ್ಕೆಂದು ರೂಪಿಸಿದ ಯೋಜನೆಗಳ ಪ್ರಯೋಜನವನ್ನು ಕೆಲವೇ ಸ್ವಾರ್ಥಿಗಳು ಪಡೆಯುತ್ತಿರುವುದರಿಂದ ಪ್ರಜಾಪ್ರಭುತ್ವದ ಬಗ್ಗೆ ಜನತೆಗಿದ್ದ ವಿಶ್ವಾಸವೇ ಬತ್ತಿಹೋಗುವ ದುರಂತಸ್ಥಿತಿಯನ್ನು 'ಗೌಡರ ಕೋಣ' ಕೃತಿಯಲ್ಲಿ ಚಿತ್ರಿಸಲಾಗಿದೆ. ಗ್ರಾಮ ಜೀವನದ ಒಳಪದರಗಳು, ರಾಜಕಾರಣಿಗಳ ಮರೆ-ಮೋಸ. ಉಳ್ಳವರ ದಂಬಾಚಾರ. ಬಡವರ ಬಾಳಿನಗೋಳು ಮುಂತಾದವು ಈ ಕಾದಂಬರಿಗಳ ವಸ್ತು. ರಾವಬಹದ್ದೂರರ ಬಿಜಾಪುರದ 'ಗಂಡುದನಿ' ಈ ಕಾದಂಬರಿಗಳಲ್ಲಿ ಕೇಳಿಸುತ್ತದೆ.

ಕಥನ ಕಲೆಯಲ್ಲೂ ಪಳಗಿದ್ದ ರಾವಬಹದ್ದೂರರು ಸುಮಾರು ಐವತ್ತು ಕಥೆಗಳನ್ನು ಪ್ರಕಟಿಸಿದ್ದಾರೆ. 'ಮನಸುಟ್ಟಕಿಡಿ'. 'ಮನಬೆಳಗಿತು'. 'ಇತಿಹಾಸ ಭೂತ'. 'ನೆರೆಹೊರೆ'- ಇವು ಇವರ ಕಥಾಸಂಕಲನಗಳು. ಸಣ್ಣಕತೆಗಾರರಾಗಿ. ಕತೆಗಳನ್ನು ಹೇಳುವ ಕಲೆಯಲ್ಲಿ ಇವರಿಗೆ ಸಿದ್ಧಿಸಿದ್ದ ಶೈಲಿ ಬೆರಗುಗೊಳಿಸುವಂಥದ್ದು. ಅನುಭವಗಳ ಗಟ್ಟಿನೆಲದ ಮೇಲೆ ಬದುಕಿನ ಸಹಸ್ರಮುಖ ದರ್ಶನ ಮಾಡಿಸುವ ಕಲೆಗಾರಿಕೆ ಇವರದು. ಬಾಂಗ್ಲಾದೇಶಕ್ಕೆ ಪ್ರವಾಸಹೋಗಿದ್ದ ಇವರು ತಮ್ಮ ಪ್ರವಾಸದ ಅನುಭವವನ್ನು 'ನಾಕಂಡ ಬಾಂಗ್ಲಾದೇಶ' ಎಂಬ ಪುಸ್ತಕದಲ್ಲಿ ಸ್ವಾರಸ್ಯವಾಗಿ ವರ್ಣಿಸಿದ್ದಾರೆ. 'ಮರೆಯದ ನೆನಹುಗಳು' ಎಂಬುದು ಒಂದು ಅನುಭವ ಸಾಹಿತ್ಯ ಅಥವಾ ಅನುಭವ ಹರಟೆಯಾಗಿದೆ. ಈ ಗ್ರಂಥದಲ್ಲಿ ತಮ್ಮ ಜೀವನದ ಬಗೆಬಗೆಯ ನೆನಪುಗಳನ್ನು ನೆನೆದಿದ್ದಾರೆ. ಒಂದು ದಶಕ ಕಾಲ ಕರ್ನಾಟಕದ ಮುಖ್ಯಮಂತ್ರಿಗಳಾಗಿದ್ದ ದೇವರಾಜ ಅರಸರ ಸಾಧನೆ-ಸಿದ್ಧಿಗಳನ್ನು 'ಅರಸುದರ್ಶನ' ಎಂಬ ಪುಸ್ತಕದಲ್ಲಿ ವಿವರಿಸಿದ್ದಾರೆ.

"ರಾವಬಹದ್ದೂರರು ಯಾವ ಅರ್ಥದಲ್ಲೂ ಸಜ್ಜನರಲ್ಲ: ತಕ್ಕ ಮಟ್ಟಿಗೆ ವಕ್ಷೋಕ್ತಿ ಕುಶಲರೇ. ಇವರ ಕಲೆ ಆಕ್ರೋಶಪಟ್ಟಿನಂತೆ ಸಮಕಾಲೀನ ಜನಜೀವನವನ್ನು ಬಿಗಿಹಿಡಿದಿವೆ. ಈ ಹಿಡಿತ ಕೆಲವರಿಗೆ ಸುಖಕರವೆನಿಸದಿರಬಹುದು. ಅಂಥವರೂ ಇವರ ಬರಹದಲ್ಲಿ ಬಂದು ನೆಲೆಸಿದ್ದಾರೆ. ಬಾಳ ಪದರಗಳಲ್ಲಿ ತೂಕವಾದದ್ದು ಯಾವುದು. ಜಳ್ಳು ಯಾವುದು. ಅಮೃತ ಯಾವುದು. ವಿಷ ಯಾವುದು ಎಂಬುದನ್ನು ನುಡಿಯುವಾಗ ಇವರ ಲೇಖನಿ ಭೀತಿಯಿಲ್ಲದೆ ಸತ್ಯಕ್ಕೆ ಗೌರವವನ್ನು ಸಲ್ಲಿಸುತ್ತದೆ. ನಿಷ್ಠುರವಾಗಿ ನುಡಿಯುವಾಗಲೂ ಇವರನ್ನು ಸಹೃದಯತೆಯಾಗಲೀ ಸೌಂದರ್ಯ ದೃಷ್ಟಿಯಾಗಲೀ ಕೈಬಿಡುವುದಿಲ್ಲ. ಇದು ಇವರ ಸಂಸ್ಕಾರದ ಫಲ"[2]

ರಾವಬಹದ್ದೂರರ ಸಾಹಿತ್ಯ ಸೇವೆಗೆ ಬಂದ ಬಹುಮಾನಗಳು ಹಲವು. ಆದರೆ 'ಇತಿಹಾಸಭೂತ' ಎಂಬ ಸಣ್ಣಕಥೆಗೆ ೧೯೫೧ ರಲ್ಲಿ ನಡೆದ ಜಾಗತಿಕ ಕಥಾಸ್ಪರ್ಧೆಯಲ್ಲಿ ಬಹುಮಾನ ಲಭಿಸಿದೆ. 'ಸುಧಾ' ಕಾದಂಬರಿ ಸ್ಪರ್ಧೆಯಲ್ಲಿ ಇವರ 'ಧೂಮಕೇತು' ಕಾದಂಬರಿ ಪ್ರಥಮ ಬಹುಮಾನ ಪಡೆಯಿತು. ರಾಜ್ಯ ಸಾಹಿತ್ಯ ಅಕಾಡೆಮಿ ರಾವಬಹದ್ದೂರರಿಗೆ ೧೯೭೫ ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿತು.

ಸ್ನೇಹಜೀವಿ. ಸಾಹಿತ್ಯಜೀವಿಯಾಗಿದ್ದ ರಾವಬಹದ್ದೂರರು ತಮ್ಮ ಎಪ್ಪತ್ತನಾಲ್ಕನೆಯ ವಯಸ್ಸಿನಲ್ಲಿ ೨೧-೧೨-೧೯೮೪ ರಲ್ಲಿ ಮರಣ ಹೊಂದಿದರು.

'ಗ್ರಾಮಾಯಣ' ಕಾದಂಬರಿಯ ಅನಂತರ ಬಂದ ಇವರ ಯಾವ ಕೃತಿಗಳೂ ಕೂಡ ಗ್ರಾಮಾಯಣದ ಮಟ್ಟಿನ ತೃಪ್ತಿಯನ್ನು ತಂದು ಕೊಡುವುದಿಲ್ಲ. ರಾವಬಹದ್ದೂರ ಹೆಸರಿಗೆ ಗ್ರಾಮಾಯಣ. ಗ್ರಾಮಾಯಣದ ಹೆಸರಿಗೆ ರಾವಬಹದ್ದೂರ್ ಅಂಟಿಕೊಂಡು ಅವಿನಾಭಾವವಾಗಿರುವುದರಿಂದಲೇ ಅವರ ಉಳಿದ ಯಾವುದೇ ಕೃತಿಗಳು ಶಕ್ತವೆನಿಸದೆ ಅವರ ಸಂಪೂರ್ಣ ಶಕ್ತಿ ಗ್ರಾಮಾಯಣದಲ್ಲೇ ವ್ಯಯವಾಗಿದೆ ಎಂದುಕೊಂಡರೂ ರಾವಬಹದ್ದೂರರು ಈ ಒಂದು ಕೃತಿಯಿಂದಲೇ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅಮರರಾಗಿ ಉಳಿಯುತ್ತಾರೆ. ಈ ಕಾದಂಬರಿ ಪ್ರಕಟವಾಗಿದ್ದು ೧೯೫೭ ರಲ್ಲಿ. ಇದು ಕನ್ನಡದಲ್ಲಿ ನವ್ಯ ಚಳುವಳಿ ಅತ್ಯಂತ ಭರಟೆಯಲ್ಲಿದ್ದ ಕಾಲ. ದೇಶಕ್ಕೆ ಸ್ವಾತಂತ್ರ್ಯವು ಬಂದು ಹೊಸ ಉತ್ಸಾಹ ಪ್ರಾಪ್ತವಾದಂತೆ, ಕಾದಂಬರಿಕಾರರಿಗೆ ಹೊಸ ವಸ್ತುಗಳು ದೊರಕಿದವು. ಹಿಂದೆ ಇದ್ದ ತ್ಯಾಗಶೀಲ ದೇಶಭಕ್ತ ಜನಾಂಗಕ್ಕೂ. ಅನಂತರದ ಭೋಗಶೀಲ ಸ್ವಾರ್ಥನಿಷ್ಠ ಜನಾಂಗಕ್ಕೂ ಇರುವ ವ್ಯತ್ಯಾಸವನ್ನು ಲೇಖಕರು ಗಮನಿಸಿದರು. ಹಿರಿಯ ಸಾಹಿತಿಗಳನ್ನು ಅನುಸರಿಸಿ. ಅನುಕರಿಸಿ ತರುಣಲೇಖಕರ ತಂಡವು ನವೋತ್ಸಾಹದಿಂದ ಕಾದಂಬರಿ ರಚನೆಗೆ ಕೈ ಹಾಕಿದರು. ಕಾದಂಬರಿಯ ವ್ಯಾಪ್ತಿ ವಿಸ್ತಾರವಾಯಿತು. ವಾಚಕರ ಸಂಖ್ಯೆಯೂ ಹೆಚ್ಚಿತು.

ಕಾದಂಬರಿಯ ವಸ್ತು ಪಟ್ಟಣಗಳು. ನಗರಗಳ ಜೀವನವನ್ನು ಮಾತ್ರ ಒಳಗೊಂಡಿದ್ದರೆ ಸಾಲದು ಎಂದು ಭಾರತದ ಗ್ರಾಮಗಳ ಜೀವನದ ಕಡೆ ಕಾದಂಬರಿಕಾರರು ಗಮನಹರಿಸಿರುವುದನ್ನು ಕಾಣಬಹುದು. ಕಾದಂಬರಿಗಳ ಇತಿಹಾಸದಲ್ಲಿ ಇದು ಅತ್ಯಂತ ಮುಖ್ಯವಾದ ವಿಷಯ. ಇವುಗಳನ್ನು ಪ್ರಾದೇಶಿಕ ಕಾದಂಬರಿಗಳೆಂದು ಕರೆಯುವುದೂ ಉಂಟು. ಗ್ರಾಮಗಳು ಎಂದರೆ ಪಟ್ಟಣ. ನಗರಗಳ ಹಾಗೆ ಒಂದೇ ರೀತಿ ಇರುವುದಿಲ್ಲ. ಅವುಗಳ ಪರಿಸರ. ಹವಾಮಾನ. ಬಿನ್ನಳೆ. ಇನ್ನೂ ಹತ್ತು ಹಲವು ಅಂಶಗಳು ಪ್ರಾದೇಶಿಕತೆಯನ್ನು ನಿರ್ಧರಿಸುತ್ತವೆ. ಕರಾವಳಿ ಸೀಮೆ. ಮಲೆನಾಡು ಬಯಲು ಪ್ರದೇಶ ಮುಂತಾದ ಪ್ರದೇಶಗಳ ಜನಜೀವನ. ಸಂಸ್ಕೃತಿ ಬೇರೆ ಬೇರೆಯಾಗಿರುತ್ತದೆ. ಹರಿಜನ. ಗಿರಿಜನರ. ಕೊಡವರ. ಕುಡಿಯರ. ಲಂಬಾಣಿಗಳ ಸಿದ್ಧಿಗಳ ಇನ್ನೂ ಮುಂತಾದ ಜನರ ಸಂಪ್ರದಾಯಗಳು ಒಂದೇ ರೀತಿ ಇರುವುದಿಲ್ಲ. ಕಾರಂತರ 'ಕುಡಿಯರ ಕೂಸು' ಕುವೆಂಪು ಅವರ ಎರಡು ಕಾದಂಬರಿಗಳು. ಹೆಚ್.ದೇವಿರಪ್ಪನವರ 'ಬೆಳುವಲದ ಮಡಿಲಲ್ಲಿ'. ತ.ರಾ.ಸು.ರವರ 'ಚಂದವಳ್ಳಿಯ ತೋಟ'. ರಾವಬಹದ್ದೂರರ 'ಗ್ರಾಮಾಯಣ' ಇನ್ನೂ ಅನೇಕ ಕಾದಂಬರಿಗಳನ್ನು ನೋಡಬಹುದು.

ಕನ್ನಡದಲ್ಲಿ ನವ್ಯ ಚಳುವಳಿಯ ಸಂದರ್ಭದಲ್ಲಿ ಪ್ರಕಟಗೊಂಡರೂ ಕೂಡ ಈ ಕಾದಂಬರಿಯಲ್ಲಿ ನವ್ಯ ಕಾದಂಬರಿಗಳಲ್ಲಿನ ಲಕ್ಷಣವನ್ನೂ ಪೂರ್ಣವಾಗಿ ಗುರುತಿಸಲು ಸಾಧ್ಯವಿಲ್ಲ. ನವ್ಯತೆಯ ಜೊತೆಗೆ ಸಾಂಪ್ರದಾಯಕ ಅಂಶಗಳೂ ಇಲ್ಲಿ ಕಂಡುಬರುತ್ತವೆ. "ಗ್ರಾಮಾಯಣ ಒಂದು ರೀತಿಯಲ್ಲಿ ಆಗಿನವರೆಗೆ ಬಂದಿದ್ದ ಕಾದಂಬರಿಗಳಿಗಿಂತ ಭಿನ್ನ- ಆದರ್ಶ ವ್ಯಕ್ತಿಗಳು ಯಾರೂ ಇಲ್ಲ ಇಲ್ಲಿ. ಕರ್ಮವು ಮರಿಗೆ ಮರಿ ಇಡುವ ಅನಿವಾರ್ಯತೆ ಕಾದಂಬರಿಯಾಗಿ ಬೆಳೆದು ನಿಂತಿದೆಯಲ್ಲದೆ, ಕಾದಂಬರಿ ನೇರವಾಗಿ ಯಾವ ಮೌಲ್ಯಗಳನ್ನೂ ಪ್ರತಿಪಾದಿಸುವುದಿಲ್ಲ. ಈ ಕಾರಣಗಳಿಂದಾಗಿ ಇದನ್ನು ನವ್ಯ ಕಾದಂಬರಿಯ ಉದಯವನ್ನು ಸೂಚಿಸುವ ಕೃತಿಗಳಲ್ಲಿ ಒಂದು ಎಂದು ಕೆಲವರು ಹೇಳುತ್ತಾರೆ."[3] ಕಾದಂಬರಿಯನ್ನು ಅಧ್ಯಯನ ಮಾಡಿದಾಗ ಈ ಮೇಲಿನ ಅಭಿಪ್ರಾಯ ಸರಿ ಎನಿಸುತ್ತದೆ.

---

**ಅಡಿಟಿಪ್ಪಣಿ:**

೧. ರಾವ್‌ಬಹದ್ದೂರ. ಮರೆಯದ ನೆನಪುಗಳು. (ಮುನ್ನುಡಿಯಿಂದ) ಪು-೧೪

೨. ಅದೇ. ಪು-೧೪

೩. ಎಚ್.ಎಸ್.ಶೇಷಗಿರಿರಾವ್. ಹೊಸಗನ್ನಡ ಸಾಹಿತ್ಯ ಚರಿತ್ರೆ. ಪು-೧೭೦

ಹುಣ್ಣಿಮೆಗಳು, ಜಾತ್ರೆ–ಉತ್ಸವಗಳ ಸಂಭ್ರಮ ಸಡಗರ: ಕಾಲರಾ. ಪ್ಲೇಗು. ನೆರೆ ಹಾವಳಿ. ಬರಗಾಲ ಮೊದಲಾದವುಗಳಿಂದುಂಟಾದ ದುಃಖದ ತೀವ್ರತೆ. ಅವು ಪಾದಳ್ಳಿಯ ಮೇಲೆ ಉಂಟು ಮಾಡಿದ ಪರಿಣಾಮ, ಕೊಲೆ, ಸುಲಿಗೆ. ಕಳ್ಳತನ ಮೊದಲಾದ ಕೃತ್ಯಗಳ ಭೀತಿ. ಬೇರೊಬ್ಬರ ಆಸ್ತಿಯನ್ನು ಕಬಳಿಸುವ ಲೋಭತನ. ವ್ಯಕ್ತಿಗಳಲ್ಲಿರುವ ಸ್ವಾರ್ಥ. ಈರ್ಷ್ಯೆ. ದ್ವೇಷ. ಜೊತೆಗೆ ಕೆಲವರಲ್ಲಿರುವ ಊರಿನ ಅಭಿಮಾನ. ಮೊದಲಾದ ಭಾವ ಪ್ರಪಂಚ ಅದ್ಭುತವಾಗಿ ಚಿತ್ರಿತವಾಗಿದೆ.

ಕಾದಂಬರಿಯು ನಮ್ಮನ್ನು ಗ್ರಾಮಗಳು ತಮ್ಮ ವ್ಯವಸ್ಥೆಯನ್ನು ಇನ್ನೂ ಬಹುಮಟ್ಟಿಗೆ ಉಳಿಸಿಕೊಂಡಿದ್ದ ಕಾಲಕ್ಕೆ ಕರೆದೊಯ್ಯುತ್ತದೆ. ಆದರೆ ಬಾಹ್ಯ ಮತ್ತು ಆಂತರಿಕ ಒತ್ತಡಗಳಿಂದಾಗಿ ಈ ವ್ಯವಸ್ಥೆ ಹೇಗೆ ಸಡಿಲವಾಗುತ್ತಿದೆ ಮತ್ತು ಕುಸಿಯುತ್ತ ಸಾಗಿದೆ ಎಂಬುದನ್ನು ತುಂಬ ಸಮರ್ಥವಾಗಿ ಚಿತ್ರಿಸಿದೆ. ಪಾದಳ್ಳಿಯ ಅವನತಿಯ ಮೂಲ ಅದರ ಸಾಮಾಜಿಕ ವ್ಯವಸ್ಥೆ ಮತ್ತು ಸಂಸ್ಕೃತಿಯಲ್ಲಿಯೇ ಇದೆ. ಊಳಿಗಮಾನ್ಯ ಪದ್ಧತಿ ಮತ್ತು ಜಾತಿ ಪದ್ಧತಿಗಳು ಬಲವಾಗಿ ಬೇರೂರಿದ್ದು ಇವುಗಳ ಜೊತೆಗೆ ಹೊರಗಿನ ಪ್ರಭಾವಗಳು ಆ ಸಮಾಜವನ್ನು ಇನ್ನಷ್ಟು ತೀವ್ರವಾಗಿ. ಕ್ಷಿಪ್ರವಾಗಿ ಕುಸಿಯುವಂತೆ ಮಾಡಿದೆ. ಒಟ್ಟಾರೆ ಕಾದಂಬರಿಯ ಪ್ರಾರಂಭದಲ್ಲಿ ಲೇಖಕರು ಹೇಳಿರುವಂತೆ 'ಸಂಧಿಕಾಲದ' ಚಿತ್ರಣ 'ಗ್ರಾಮಾಯಣ' ಕಾದಂಬರಿಯಲ್ಲಿದೆ. ೧೯ನೇ ಶತಮಾನದ ಅಂತ್ಯಭಾಗದಲ್ಲಿ ಸಮಾಜದಲ್ಲಿ ಚಾಲ್ತಿಯಲ್ಲಿದ್ದ ಸರಂಜಾಮಿ ಪದ್ಧತಿ ಮತ್ತು ಜಾತಿ ಪದ್ಧತಿಯಿಂದಾಗಿ ಸತ್ವವನ್ನು ಕಳೆದುಕೊಳ್ಳುತ್ತಿದ್ದ ಇಲ್ಲಿನ ವ್ಯವಸ್ಥೆ ಪಾಶ್ಚಾತ್ಯ ಸಂಸ್ಕೃತಿ ನಾಗರೀಕತೆಗಳ ಆಘಾತವನ್ನು ಎದುರಿಸಬೇಕಾಯಿತು. ಪಾಶ್ಚಾತ್ಯರ ಪ್ರಭಾವ ನಿಧಾನವಾಗಿ ನಗರಗಳಿಂದ ಹಳ್ಳಿಗಳನ್ನು ವ್ಯಾಪಿಸಿಕೊಂಡಿತು. ಗ್ರಾಮಗಳಲ್ಲಿ ಹಿಂದೆ ಇದ್ದ ಮೌಲ್ಯಗಳು ಕುಸಿಯಲಾರಂಭಿಸಿತು. "ಗ್ರಾಮಾಯಣ ಅಂಥ ಸಂಕ್ರಮಣಕಾಲದ ಜೀವನದ ಸಂಕಟವನ್ನು. ತಳಮಳವನ್ನು ಸಮರ್ಥವಾಗಿ ಅಭಿವ್ಯಕ್ತಿಸಿದೆ. ಬದಲಾದ ಕಾಲ ಮತ್ತು ಪರಿಸರಕ್ಕೆ ಅನುಗುಣವಾಗಿ ಅರ್ಥವನ್ನು ಕಳೆದುಕೊಂಡು ಟೊಳ್ಳಾಗಿರುವ ಸಾಮಾಜಿಕ ವ್ಯವಸ್ಥೆ ಒಂದಲ್ಲ. ಒಂದು ದಿನ ಸಂಪೂರ್ಣವಾಗಿ ನಾಶ ಹೊಂದುತ್ತದೆಂಬ ಸತ್ಯವನ್ನು ಕಾದಂಬರಿ ಎತ್ತಿ ಹಿಡಿದಿದೆ.

ಪಾದಳ್ಳಿಯ ಮೂಲ ಹೆಸರು ಪರಶುರಾಮಕ್ಷೇತ್ರ. ಪರಶುರಾಮನ ಅವತಾರದ ಪೌರಾಣಿಕ ಹಿನ್ನೆಲೆಯನ್ನು ಹೊಂದಿರುವ ರಾಮಪಾದಳ್ಳಿ ಕಾಲಕ್ರಮೇಣ ಪೌರಾಣಿಕ ನೆನಪುಗಳೆಲ್ಲ ಅಳಿಸಿಹೋಗಿ ಬರೀ ಪಾದಳ್ಳಿಯಾಗಿದೆ. ಜನರಿಗೆ ಗೊತ್ತಿದ್ದ ಇತಿಹಾಸವೆಂದರೆ ಮರಾಠಾ ಸರದಾರನ ತಿಜೋರಿಯನ್ನು ಕಳವು ದರೋಡೆಗಳಿಂದ ತುಂಬುತ್ತಿದ್ದ ಹುಲಿಬ್ಯಾಟೆ ಹಳಬರದು. ಪರಶುರಾಮ ಸಂಹಾರ ಮಾಡಿದ ರಾಕ್ಷಸರು ಹೆಚ್ಚು ಪರಿಚಿತ ಅವತಾರಗಳಲ್ಲಿ ಕಾಣಿಸಿಕೊಂಡು ಪಾದಳ್ಳಿಯನ್ನು ಒಂದು ಪಾಪದ ಭೂಮಿಯನ್ನಾಗಿ ಪರಿವರ್ತಿಸಿದ್ದಾರೆ.

ಹೀಗೆ ಸಂಸ್ಕೃತಿಯ ಅವನತಿಯ ಇತಿಹಾಸ ಅದರ ಹಸಿರಿನ ಇತಿಹಾಸದಲ್ಲೇ ಪ್ರತಿಫಲಿತವಾಗುತ್ತದೆ. ಗ್ರಾಮಾಯಣದಲ್ಲಿ ರಾವಬಹದ್ದೂರರು ಇಡೀ ಒಂದು ಜೀವನ ಕ್ರಮವನ್ನು ಅದರ ಭೌತಿಕ ಹಾಗೂ ಅಭೌತಿಕ ಅಂಶಗಳೊಡನೆ ಅದ್ಭುತವಾಗಿ ಪುನರ್ನಿರ್ಮಿಸಿದ್ದಾರೆ. ಪಾದಳ್ಳಿಯ ಅವನತಿಯ ಇತಿಹಾಸ ಪ್ರಾರಂಭದಲ್ಲಿಯೇ ಗೋಚರವಾಗುತ್ತದೆ. ವಾಡೆಯಲ್ಲಿಯ ಅಂತಃಕಲಹ ಹೊರನುಗ್ಗಿ ಊರಿನ ಮೇಲೆ ಪರಿಣಾಮ ಬೀರುತ್ತದೆ. ಹೆಣ್ಣಿನ ಮೋಹ ಯಾರದೋ ದುರ್ಮರಣಕ್ಕೆ ಕಾರಣವಾಗಿ. ಅದರಿಂದ ಹುಟ್ಟಿದ ಸಮಸ್ಯೆಯನ್ನು ಬಿಡಿಸಲು ಹೋದಾಗ ಒಂದಿದ್ದ ಸಮಸ್ಯೆ ನೂರಾಗಿ ಹಬ್ಬಿ ಕಾಲರಾ. ಪ್ಲೇಗು ಮೊದಲಾದ ಪಿಡುಗಿನಲ್ಲಿ. ನೆರೆಹಾವಳಿ ಬರಗಾಲದಲ್ಲಿ ಘೋರವಾಗಿ ಕೊನೆಗೆ ಬರುವ ಸರ್ವನಾಶದಲ್ಲಿ ಈ ಇತಿಹಾಸ ಕೊನೆಗೊಳ್ಳುತ್ತದೆ. ಕಾಲರಾ. ಪ್ಲೇಗು. ನೆರೆಹಾವಳಿಯಂಥ ಹೊರಗಿನ ಕಾರಣವಲ್ಲದೆ ಪಾದಳ್ಳಿಯ ಆಂತರಿಕ ಜೀವನದಲ್ಲಿಯ ನೈತಿಕ ಅಧಃಪತನವೂ ಇದಕ್ಕೆ ಕಾರಣವಾಗುತ್ತದೆ. ಸತ್ವಹೀನವಾದ ಪಾದಳ್ಳಿಯ ಅವನತಿಗೆ ಪ್ರಕೃತಿಯೂ ಕೈ ಜೋಡಿಸುತ್ತದೆ. ಒಟ್ಟಾರೆಯಾಗಿ ಯಾವುದೇ ಘಟನೆ. ಸನ್ನಿವೇಶಗಳು. ಎಷ್ಟೇ ದೂರದಲ್ಲಿ ಘಟಿಸಿದ್ದರೂ. ಕಥೆಯ ಕಾಲಕ್ರಮವನ್ನು ತಪ್ಪಿಸಿ ಹಿಂದೆ ಎಂದೋ ನಡೆದಿದ್ದರೂ ಬೇರೆ ಊರಿನ ಯಾರೇ ವ್ಯಕ್ತಿಗಳು ಭಾಗಿಯಾಗಿದ್ದರೂ ಕೂಡ ಅವೆಲ್ಲವೂ ಪಾದಳ್ಳಿಯ ಜೀವನದೊಡನೆ ಒಂದು ರೀತಿಯ ರಕ್ತ ಸಂಬಂಧವನ್ನು ಹೊಂದಿರುತ್ತವೆ. ಹಾಗಾಗಿ "ಕತೆ. ಪಾದಳ್ಳಿಯನ್ನು ಬಿಟ್ಟು ಇನ್ನೊಂದು ಊರಿಗೆ ಹೋದರೂ. ಬೇರೆ ಊರಿನ ವ್ಯಕ್ತಿಗಳು ಪಾದಳ್ಳಿಗೆ ಬಂದರೂ ಪಾದಳ್ಳಿಯ ಜೀವನವೇ ಅಲ್ಲಿ ಪ್ರಕಾಶಿತವಾಗುತ್ತದೆ".

ಪಾದಳ್ಳಿಯಲ್ಲಿ ನಾಲ್ಕು ಕೇಂದ್ರಸ್ಥಾನಗಳನ್ನು ಗುರುತಿಸಬಹುದು. ಅವುಗಳೆಂದರೆ. ರಾಣೋಜಿರಾವ್ ಘೋರ್ಪಡೆಯ ಮನೆತನದ ನಿವಾಸಸ್ಥಾನವಾದ ವಾಡೆ. ಗ್ರಾಮಾಧಿಕಾರಿಗಳಾದ ಶಂಕರಪ್ಪಗೌಡ ಮತ್ತು ಶೇಷಪ್ಪ ಕುಲಕರ್ಣಿ ಪ್ರತಿನಿಧಿಸುವ ಬ್ರಿಟಿಷ್ ಸರಕಾರದ ಅಧಿಕಾರಿ. ಪಡದಯ್ಯ ಮಠಾಧಿಪತಿಯಾಗಿರುವ ಹಿರೇಮಠ ಹಾಗೂ ರಾಜ ಪುರೋಹಿತನಾದ ಬಾಳಾಚಾರ್ಯನೆಂಬ ಹೆಸರಿನ ಬ್ರಾಹ್ಮಣ. ಪಾದಳ್ಳಿಯ ಜೀವನವೆಲ್ಲ ಈ ನಾಲ್ಕು ಕೇಂದ್ರಗಳಿಂದ ನಿಯಂತ್ರಿತವಾಗಿದೆ. ಹೀಗೆಂದಾಕ್ಷಣ ರಾವಬಹದ್ದೂರರು ಸೃಷ್ಟಿಸುವ ಆವರಣ ಕೇವಲ ಈ ನಾಲ್ಕು ಕೇಂದ್ರಗಳಿಗೆ ಮಾತ್ರ ಸೀಮಿತವಾಗಿಲ್ಲ. ಇದೊಂದು ಸಮೃದ್ಧವಾದ ಜಗತ್ತು. ಇಲ್ಲಿ ವಾಡೆಗೆ ಸಂಬಂಧಿಸಿದಹಾಗೂ ಹೊರಗಿನ ರೈತರು. ಆಳುಕಾಳುಗಳು. ಹುಲಿಬೇಟೆ ಮಾಡುವ ಹಳಬರು. ಕುರುಬರು. ಉಳಿದ ಹಿಂದುಳಿದ ಜಾತಿಯ ಜನ. ದಲಿತರು. ಪಡದಯ್ಯನ ಅನುಯಾಯಿಗಳು. ಪಾದಳ್ಳಿಗೆ ಆಗಮಿಸುವ ಹೊರಗಿನ ವ್ಯಕ್ತಿಗಳು. ಸರ್ಕಾರಿ ಅಧಿಕಾರಿಗಳು–ಹೀಗೆ ವಿಶಾಲವಾದ ಪ್ರಪಂಚ ಇಲ್ಲಿ ಹಬ್ಬಿಕೊಂಡಿದೆ. ಕಾಲದ ಗತಿಯನ್ನು ಸೂಚಿಸುವ ಉತ್ಸವಗಳು. ಪ್ಲೇಗ್.

ಕಾಲರಾಗಳಂಥ ಸಾಂಕ್ರಾಮಿಕ ರೋಗಗಳು, ಬಣವೆ ಸುಡುವುದು, ಕಾಳು ಕದಿಯುವುದು, ಮೊದಲಾದ ಅಪರಾಧಗಳು ಇಲ್ಲಿಯ ಬದುಕಿಗೆ ಆಕಾರ ಕೊಡುತ್ತವೆ. ಬಿಂದುಪುರ ಮತ್ತು ಅಜರಾಣೆಗಳಂಥ ಗ್ರಾಮಗಳೊಡನೆ ಪಾದಳ್ಳಿ ಹೊಂದಿದ ಸಂಬಂಧಗಳು ಇತ್ಯಾದಿ ಪಾದಳ್ಳಿಯನ್ನು ಹೊರಗಿನ ಜಗತ್ತಿನೊಡನೆ ಜೋಡಿಸುತ್ತವೆ.

ಕಾದಂಬರಿಯ ಪ್ರಾರಂಭದಲ್ಲಿ ಬರುವ ಲಕ್ಷ್ಮೀಬಾಯಿ ಮತ್ತು ಪುತಳಾಬಾಯಿಯವರಲ್ಲಿ ಉಂಟಾದ ಜಗಳ ಮುಂದೆ ಬೆಳೆಯುತ್ತಾ ಇಡೀ ಊರನ್ನೇ ಕಬಳಿಸುತ್ತದೆ. ಊರನ್ನು ತಂದೆಯಂತೆ ನಡೆಸಿಕೊಂಡು ಹೋಗುತ್ತಿದ್ದ ರಾಣೋಜಿರಾಯರ ಮರಣದ ನಂತರ ಹೆಂಡತಿ ಲಕ್ಷ್ಮೀಬಾಯಿ ವಾಡೆಯನ್ನು ಬಿಟ್ಟು ಹೋಗಿ ಬಹಳ ದಿನಗಳು ಜಾರದೆ ಹುಟ್ಟಿದ ದಿನಗಳಲ್ಲೂ ವಾಡೆಯನ್ನು ಹಾಳುಗೆಡಹುವ ಜವಾಬ್ದಾರಿ ರಹಿತ ವರ್ತನೆಯಿಂದ ಪಾದಳ್ಳಿಯ ಅವನತಿ ಶುರುವಾಗುತ್ತದೆ. ವಾಡೆಯ ಸಮಸ್ತ ಜವಾಬ್ದಾರಿ ರಾಣೋಜಿರಾಯರ ಕಿರಿಯ ಹೆಂಡತಿ ಪುತಳಾಬಾಯಿ ಮತ್ತು ಆವಳ ತಮ್ಮ ಬಾಪೂ ಸಾಹೇಬರಿಗೆ ಅನಾಯಾಸವಾಗಿ ಲಭಿಸುತ್ತದೆ. ನಂತರದ ದಿನಗಳಲ್ಲಿ ಪುತಳಾಬಾಯಿ ನಾಮಮಾತ್ರಳಾಗಿ ಉಳಿದು ತಮ್ಮನಾದ ಬಾಪು ಸಾಹೇಬ ವಾಡೆಯ ಹಕ್ಕುಬಾಧ್ಯತೆಗಳೆಲ್ಲ ತನಗೆ ಮೀಸಲಾದವೆಂಬ ದರ್ಪದಿಂದ ವರ್ತಿಸಲಾರಂಭಿಸುತ್ತಾನೆ. ಶಿರೇದಾರ ನಾನಾನ ಮಗಳು ಚಿಮಣಾಳ ಮೇಲೆ ಆಸೆಪಡುತ್ತಾನೆ. ಈ ಒಂದು ಕ್ಷಣದ ಮೋಹ ಹಲವು ದುರಂತಗಳಿಗೆ ಕಾರಣವಾಗುತ್ತದೆ. ಈ ದುರಂತ ಪ್ರಾರಂಭವಾಗುವುದಕ್ಕೆ ಕಾರಣವಾಗುವುದು ಚಿಮಣಾಳ ಮೇಲೆ ನಡೆಯುವ ಬಲಾತ್ಕಾರ. ತಾಯಿಯನ್ನು ಕಳೆದುಕೊಂಡ ಮುಗ್ಧ ಹಾಗೂ ನಿಷ್ಪಾಪಿ ತರುಣಿ ಚಿಮಣಾ ಒಳಗಾಗುವ ಅತ್ಯಾಚಾರಕ್ಕೆ ಕಾರಣನಾದ ವ್ಯಕ್ತಿಯನ್ನು ಸ್ವತಃ ಚಿಮಣಾ ಬಹಿರಂಗ ಪಡಿಸದರೂ ಸಹ ಊರಿನ ಸಮಗ್ರತೆಯನ್ನು ಕಾಯುವ ನೆಪದಿಂದ ಈ ಅಪರಾಧವನ್ನು ಮುಚ್ಚುವ ಪ್ರಯತ್ನ ನಡೆಯುತ್ತದೆ. ಈ ಘಟನೆ ಒಂದು ವೈಯಕ್ತಿಕ ಪ್ರಸಂಗವಾಗದೆ ಅದಕ್ಕೆ ಸಾರ್ವಜನಿಕ ಸ್ವರೂಪ ಬಂದುಬಿಡುತ್ತದೆ. ಆ ಪಾಪದ ಹೊಣೆ ಇಡೀ ಊರಿನ ಮೇಲೆಯೇ ಬಿದ್ದಂತಾಗುತ್ತದೆ. ಅದುವರೆಗೂ ಸಮಾಜದಲ್ಲಿ ಇದ್ದ ಮೌಲ್ಯಕ್ಕೆ ಧಕ್ಕೆ ಉಂಟಾಗುತ್ತದೆ. ಆ ಸಮಾಜದ ನೈತಿಕ ಅಧಃಪತನವನ್ನು ಸೂಚಿಸುತ್ತದೆ. ಪಾಪ ಯಾರನ್ನೂ ಬಿಡುವುದಿಲ್ಲವೆಂಬಂತೆ ಮುಂದೆ ನಡೆಯುವ ಘಟನೆಗಳಿಗೆಲ್ಲ–ನಾನಾನ ಕೊಲೆ, ಪುತಾಳಾಬಾಯಿಯ ಆತ್ಮಹತ್ಯೆ, ಗ್ರಾಮಾಧಿಕಾರಿಗಳ ಪರಸ್ಪರ ನಾಶ, ಪಡದಯ್ಯನ ಅಮಾನುಷ ಸೇಡಿನ ಕೃತ್ಯಗಳು, ದಾದಾನಂಥ ನಿರಪರಾಧಿಯ ಬಲಿ ಇತ್ಯಾದಿಗಳಿಗೆಲ್ಲ ಚಿಮಣಾಳ ಬಲಾತ್ಕಾರವೇ ಕಾರಣವಾಗುತ್ತದೆ.

ತನ್ನ ಮಗಳ ದುಸ್ಥಿತಿಯನ್ನು ಕಂಡು ನೊಂದ ನಾನಾ ಆಕೆಯ ಬಾಳನ್ನು ಸರಿಪಡಿಸಲು ಪ್ರಯತ್ನಿಸಿ ವಿಫಲನಾಗಿ ರೊಚ್ಚಿಗೇಳುತ್ತಾನೆ. ತನ್ನ ಮತ್ತು ಪುತಳಾಬಾಯಿಯ ಅನೈತಿಕ

ಸಂಬಂಧವನ್ನು ಹೊರಜಗತ್ತಿಗೆ ಸಾರುವುದಾಗಿ ಬೆದರಿಕೆ ಹಾಕುತ್ತಾನೆ. ಇದರಿಂದ ಆತಂಕಕ್ಕೊಳಗಾದ ಪುತಳಾ ನಾನಾನನ್ನು ಕೊಲೆಗೈಯುತ್ತಾಳೆ.

ದೈವದವರು ಸಭೆ ಸೇರಿ ಲಂಚ ತಿಂದು ನಾನಾನ ಸಾವನ್ನು ಮುಚ್ಚಿ ಹಾಕುವ ಪ್ರಯತ್ನ ಮಾಡುತ್ತಾರೆ. ನಿರೀಕ್ಷಿಸಿದಷ್ಟು ಹಣ ತನಗೆ ದೊರೆಯಲಿಲ್ಲವೆಂದು ಕುಲಕರ್ಣಿ ಶೇಷಪ್ಪ ತಕರಾರು ತೆಗೆಯುತ್ತಾನೆ. ಇದು ಮುಂದೆ ವಾಡೆ–ಮಠ ಮತ್ತು ಗೌಡರ ಮನೆತನಗಳ ನಡುವೆ ದ್ವೇಷಕ್ಕೆ ಕಾರಣವಾಗುತ್ತದೆ. ವಾಡೆ–ಮಠ–ಗೌಡರ ಮನೆತನ ಇವುಗಳ ನಡುವೆ ನಡೆಯುವ ತಿಕ್ಕಾಟವೇ ಈ ಕಾದಂಬರಿಯಲ್ಲಿ ಪ್ರಧಾನವಾಗಿದೆ. ಊರ ಪ್ರಮುಖರಲ್ಲಿ ಮನೆ ಮಾಡಿಕೊಂಡಿರುವ ಅಹಂಕಾರ. ಪ್ರತಿಷ್ಠೆ. ಈರ್ಷ್ಯೆ. ದರ್ಪ. ಸ್ವಾರ್ಥ ಮುಂತಾದವುಗಳು ಪಾದಳ್ಳಿಯ ಘೋರ ಅವನತಿಗೆ ಕಾರಣವಾಗುತ್ತವೆ. ಬಾಳಾಚಾರ್ಯರನ್ನು ಹೊರತುಪಡಿಸಿ ಊರ ಉದ್ಧಾರದ ಬಗೆಗೆ ಯಾರೂ ಕೂಡ ಚಿಂತಿಸುವುದೇ ಇಲ್ಲ. ಶಂಕರಗೌಡರು ಊರಿನ ಬಗೆಗೆ ಅಭಿಮಾನ. ಕಾಳಜಿ ಇದ್ದರೂ ಕೂಡ ಅವರಲ್ಲೂ ಸ್ವಾರ್ಥ. ಪ್ರತಿಷ್ಠೆ ಆವರಿಸಿರುತ್ತದೆ. ಒಂದು ದುರಂತವೆಂದರೆ ಗೌಡರಿಗೆ ತಮ್ಮ ತಪ್ಪಿನ ಅರಿವಾಗಿ. ಪಶ್ಚಾತ್ತಾಪದ ಭಾವನೆ ತೀವ್ರವಾಗಿ ಇನ್ನು ಮುಂದೆ ಊರಿಗೆ ಅನ್ಯಾಯವಾಗದಂತೆ ನಡೆದು ಕೊಳ್ಳುತ್ತೇನೆಂಬ ದೃಢನಿರ್ಧಾರಕ್ಕೆ ಬಂದ ಕೆಲವೇ ದಿನಗಳಲ್ಲಿ ಸಾವು ಅವರನ್ನು ಆವರಿಸಿಕೊಳ್ಳುತ್ತದೆ. ಕಾದಂಬರಿಯ ಬಹುಪಾಲು ಪಾತ್ರಗಳಿಗೆ ತಮ್ಮ ತಪ್ಪಿನ ಅರಿವಾಗುವುದು ಜೀವನದ ಅಂತ್ಯದ ಸಂದರ್ಭದಲ್ಲಿ ಎಂಬುದು ಸಾಮಾನ್ಯ ಅಂಶವಾಗಿದೆ.

ಸಮಾಜದಲ್ಲಿನ ಪ್ರತಿಷ್ಠಿತ ವರ್ಗ ಎಲ್ಲಾ ಸಂದರ್ಭಗಳನ್ನು ತಮ್ಮ ಸ್ವಾರ್ಥ ಸಾಧನೆಗಾಗಿ ಹೇಗೆ ಬಳಸಿಕೊಳ್ಳುತ್ತಾರೆಂಬುದನ್ನು ಕಾದಂಬರಿ ಚೆನ್ನಾಗಿ ಚಿತ್ರಿಸಿದೆ. ಅದಕ್ಕೊಂದು ಉದಾಹರಣೆಯೆಂದರೆ ಬರಗಾಲದಿಂದ ಜನಸಾಮಾನ್ಯರು ಹೊಟ್ಟೆಗಿಲ್ಲದೆ ಸಂಕಟಕ್ಕೆ ಗುರಿಯಾಗಿರುವಾಗ ಅವರ ಹಸಿವನ್ನು ನೀಗಿಸಲು ಶಂಕರಪ್ಪಗೌಡ. ಬಾಪು ಸಾಹೇಬ ಪಡದಪ್ಪ ಇವರೆಲ್ಲರು ಮುಂದಾಗುತ್ತಾರೆ. ಆದರೆ ಇವರ ಉದ್ದೇಶ ಬಡವರ ಹಸಿವನ್ನು ನೀಗಿಸುವುದಲ್ಲ. ಬದಲಾಗಿ ತಮ್ಮ ತಮ್ಮ ಸ್ವಾರ್ಥ ಸಾಧನೆಗಾಗಿ ಬಳಸಿಕೊಳ್ಳುವುದನ್ನು ಗಮನಿಸಬಹುದು. ತಮ್ಮ ಪ್ರತಿಷ್ಠೆ, ಅಧಿಕಾರಕ್ಕಾಗಿ ಊರಿನ ಪ್ರತಿಷ್ಠಿತರು– ಪರಸ್ಪರ ದ್ವೇಷ ಅಸೂಯೆಗಳಿಂದ ಬಣಗಳನ್ನು ಕಟ್ಟಿಕೊಳ್ಳುತ್ತಾರೆ. ಇದು ಮೌಲ್ಯಗಳ ಕುಸಿತವನ್ನು ಸೂಚಿಸುತ್ತದೆ.

ಅನಾದಿ ಕಾಲದಿಂದಲೂ ಶ್ರದ್ಧೆ. ಭಕ್ತಿ. ಗೌರವವನ್ನು ಪಡೆದುಕೊಂಡಿದ್ದ ಮಠ ಒಬ್ಬ ಅನರ್ಹ ವ್ಯಕ್ತಿಯಿಂದ ಹೇಗೆ ತನ್ನ ಪಾವಿತ್ರ್ಯತೆಯನ್ನು ಕಳೆದುಕೊಳ್ಳುತ್ತದೆಂಬುದನ್ನು ಕಾದಂಬರಿ ಚೆನ್ನಾಗಿ ಚಿತ್ರಿಸಿದೆ. ನೀತಿಯ ಕೇಂದ್ರವಾಗಬೇಕಿದ್ದ ಮಠ ಅನೀತಿಯ ಕೇಂದ್ರವಾಗಿಬಿಡುತ್ತದೆ. ಜನತೆಯಲ್ಲಿ ನೈತಿಕತೆ. ಆಧ್ಯಾತ್ಮಿಕತೆಯನ್ನು ಬೆಳೆಸಿ ಸಮಾಜಕ್ಕೆ ಮಾರ್ಗದರ್ಶಕವಾಗಬೇಕಿದ್ದ

ಮಠ. ಮನೆ-ಮನಗಳನ್ನು ಸರ್ವನಾಶಮಾಡಿದೆ. ದುಡಿಯಬೇಕಾದ ಕೈಗಳು ಮಠದಾಗಿನ ಗುಟುಕು ಸರಾಯಿಗೆ ಶರಣಾಗಿವೆ. ಮಠ ತನ್ನ ಪಾವಿತ್ರ್ಯತೆಯನ್ನು ಕಳೆದುಕೊಂಡು ಕುಡುಕರ ಜೂಜುಕಟ್ಟೆಯಾಗಿ ಮಾರ್ಪಟ್ಟಿದೆ. ಇದಕ್ಕೆ ಕಾರಣನಾದ ವ್ಯಕ್ತಿ ಪಡದಯ್ಯ. ಈತ ಮೇಲ್ನೋಟಕ್ಕೆ ಸ್ವಾಮಿ. ಗುರುವಿನ ವೇಷ ಧರಿಸಿ ಅಂತರಂಗದಲ್ಲಿ ಅನೀತಿ. ಕಪಟ. ಕುತಂತ್ರ. ಕಾಮುಕತನದ ಮಡು. ಒಂದು ರೀತಿಯ ಗೋಮುಖ ವ್ಯಾಘ್ರವೆಂದರೂ ತಪ್ಪಾಗಲಾರದು. ಏಕೆಂದರೆ ಪಾದಕ್ಕಿಯ ದಾರುಣ ದುರಂತಕ್ಕೆ ಮೂಲ ಕಾರಣಕರ್ತನೇ ಈತ. ಮಠಾಧಿಪತಿಯ ಸ್ಥಾನದಲ್ಲಿದ್ದುಕೊಂಡೇ ಭೋಗಜೀವನವನ್ನು ನಡೆಸುತ್ತಾನೆ. ಈತ ದಾನವ್ವನನ್ನು ರಾಜಾರೋಷವಾಗಿ ಮಠದಲ್ಲಿಯೇ ಇಟ್ಟುಕೊಳ್ಳುತ್ತಾನೆ. ಅನೈತಿಕ ಸಂಬಂಧಗಳೂ ಈ ಕಾದಂಬರಿಯ ಮುಖ್ಯ ಎಳೆಗಳಲ್ಲೊಂದಾಗಿರುವುದನ್ನು ಗಮನಿಸಬೇಕು. ಪಾದಕ್ಕಿಯ ದುರಂತಕ್ಕೆ ಚಿಮಣಾಳ ಮೇಲೆ ಆದ ಅತ್ಯಾಚಾರವೇ ಕಾರಣವಾಗುತ್ತದೆ. ಲೌಕಿಕ ಜಂಜಾಟಗಳಿಂದ ದೂರವಾಗಿ ವಿರಕ್ತನಾಗಿರಬೇಕಿದ್ದ ಪಡದಯ್ಯ ಊರಿನ ಎಲ್ಲಾ ಘಟನೆಗಳಲ್ಲೂ ಭಾಗಿಯಾಗಿರುವುದರ ಜೊತೆಗೆ ಆ ಎಲ್ಲಾ ಘಟನೆಗಳ ಸೂತ್ರಧಾರನೂ ಆಗಿರುತ್ತಾನೆ. ಜನರ ಅಸಹಾಯಕತೆಯ ಲಾಭ ಪಡೆದು ಹಲವು ಹೀನ ಕೃತ್ಯಗಳಿಗೆ ಕಾರಣನಾಗುತ್ತಾನೆ. ಹಗೆಯನ್ನು ಲೂಟಿ ಮಾಡುವುದು. ಬಣವೆಗೆ ಬೆಂಕಿ ಹಚ್ಚುವುದು. ಬಿತ್ತಿದ ನೆಲವನ್ನು ಹರಗಿಸಿದ್ದು. ನಿರಪರಾಧಿಯಾದ ದಾದಾನ ಮೇಲೆ ಆಪಾದನೆ... ಎಲ್ಲಕ್ಕಿಂತ ಹೆಚ್ಚಾಗಿ ಚಿಮಣಾಳ ಮೇಲಿನ ಅತ್ಯಾಚಾರ ಹೀಗೆ ಒಂದಲ್ಲ ಹತ್ತಾರು ಹೀನ ಕೃತ್ಯಗಳು ಪಡದಯ್ಯನ ಕಪಟತನದ ವ್ಯಕ್ತಿತ್ವವನ್ನು ಅನಾವರಣ ಮಾಡುತ್ತವೆ. ಪವಿತ್ರ ಸ್ಥಾನವಾದ ಮಠದ ಅಧಿಪತ್ಯವನ್ನು ಅನರ್ಹ ವ್ಯಕ್ತಿ ವಹಿಸಿಕೊಂಡಿದ್ದೇ ಆದರೆ ಆಗುವ ವಿಪತ್ ಪರಂಪರೆಯ ಚಿತ್ರಣವನ್ನು ಕಾದಂಬರಿ ಚಿತ್ರಿಸಿದೆ. ಸಾಂಪ್ರದಾಯಿಕ ವ್ಯವಸ್ಥೆಯ ದುರಂತ ಇದಾಗಿದೆ.

ಯಾವುದೋ ಪಾಪದ ಕಾರಣಕ್ಕಾಗಿ ಪಾದಕ್ಕಿ ಹೀಗೆ ನರಳಬೇಕಾಗಿದೆ ಎಂಬುದನ್ನು ಕಾದಂಬರಿ ಹೇಳಲು ಹವಣಿಸಿದೆ. ಪರಂಪರಾಗತವಾಗಿ ಉಳಿಸಿಕೊಂಡು ಬಂದಿದ್ದ ಪಾದಕ್ಕಿಯ ಸತ್ವಯುತ ಮೌಲ್ಯಗಳು ಕ್ಷೀಣಿಸತೊಡಗುತ್ತದೆ. ಅನೈತಿಕ ಸಂಬಂಧ ಪಾಪ ಎಂಬುದನ್ನು ಕಾದಂಬರಿ ನೇರವಾಗಿ ಹೇಳದೆ ಹೋದರೂ ಕಾದಂಬರಿಯನ್ನು ಓದುವ ಓದುಗರಿಗೆ ತಂತಾನೆ ಮನದಟ್ಟಾಗುತ್ತದೆ. ಬಾಪೂ-ಚಿಮಣಾಳ ಪ್ರಸಂಗ. ಅದಕ್ಕಿಂತ ಹಿಂದೆಯೇ ನಡೆದಿರುವ ನಾನಾ- ಪ್ರತಳಾರ ಸಂಬಂಧಗಳಿಂದಾಗಿ ಪಾದಕ್ಕಿಯ ದುರಂತ ಪ್ರಾರಂಭವಾಗಿದೆ ಎಂಬುದನ್ನು ಈಗಾಗಲೇ ಗಮನಿಸಿದ್ದೇವೆ. ಕಾದಂಬರಿಯ ಉದ್ದಕ್ಕೂ 'ಪಾಪ'ದ ವಿಚಾರ ಬೇರೆ ಬೇರೆ ವಿಧದಲ್ಲಿ ವಿನ್ಯಾಸಗೊಂಡಿದೆ. 'ಪಾಪ. ರಕ್ತಬೀಜ ರಾಕ್ಷಸನಂತೆ: ಕೊಂದರೆ ಸಾಯಲಾರದ ವಸ್ತುವೆಂದರೆ ಅದೊಂದೇ. ನೂರು ನಾನಾ ಸಾಹೇಬರು

ಸತ್ತರೂ ಪಾಪ ಸಾಯಲಾರದು' ಎನ್ನುವ ಮಾತು ಕಾದಂಬರಿಯಲ್ಲಿಯೇ ಬರುತ್ತದೆ. ಹಾಗೆಯೇ ಒಂದೆಡೆ ಬಾಳಾಚಾರ್ಯರು ನಾವು ಮಾಡಿದ ಪಾಪಕ್ಕೆಲ್ಲ ಪ್ರಾಯಶ್ಚಿತ್ತವನ್ನು ಅನುಭವಿಸಲೇಬೇಕು'. ಎಂಬಂಥ ಮಾತುಗಳೂ ಬರುತ್ತವೆ. ಪಾಪದ ಪ್ರಸ್ತಾಪ ಕಾದಂಬರಿಯಲ್ಲಿ ಅಲ್ಲಲ್ಲಿ ಬಂದರೂ ಕೂಡ ಲೇಖಕರು ಪಾಪ ಯಾವುದು, ಯಾವುದಲ್ಲ ಎನ್ನುವುದನ್ನು ವಿಶ್ಲೇಷಿಸುವ ಕೆಲಸಕ್ಕೆ ತೊಡಗದೆ ಓದುಗರ ತಲೆಗೆ ಬಿಡುತ್ತಾರೆ. ಆದರೂ ಲೇಖಕರ ನಿಲುವು ಪರಂಪರಾಗತ ವಿಚಾರಗಳನ್ನು ಎತ್ತಿಹಿಡಿಯುವಂತೆ ಕಂಡುಬರುತ್ತದೆ. ಚಿಮಣಾಳ ವಿಚಾರದಲ್ಲಿ ಪಡದಯ್ಯ ಮಾಡಿದ್ದು ಅನೀತಿ ಎಂಬುದು ಬಾಳಾಚಾರ್ಯರಾದಿಯಾಗಿ ಎಲ್ಲರಿಗೂ ಗೊತ್ತಿದ್ದರೂ ಕೂಡ ಯಾರೂ ಅದನ್ನು ಪ್ರಶ್ನಿಸುವ ತಪ್ಪಿಗೆ ಶಿಕ್ಷೆ ವಿಧಿಸುವ ಸಾಹಸಕ್ಕೆ ಕೈ ಹಾಕುವುದಿಲ್ಲ. ಬದಲಾಗಿ ಆ ಪರಿಸ್ಥಿತಿಯನ್ನು ಮೂಕವಾಗಿ ಒಪ್ಪಿಕೊಳ್ಳುತ್ತಾರೆ. ನಮ್ಮ ಜನರು ಮಠ ಹಾಗೂ ಮಠಾಧಿಪತಿಯ ಬಗೆಗೆ ಇಟ್ಟಿರುವ ಬದಲಾಗದ ನಂಬಿಕೆ. ಪಾವಿತ್ರ್ಯತೆಯನ್ನು ತೋರಿಸುತ್ತದೆ.

ಗ್ರಾಮಾಯಣ ಕಾದಂಬರಿಯಲ್ಲಿ ಕೇಂದ್ರ ವ್ಯಕ್ತಿಯಾಗಿ ನಿಲ್ಲಬಲ್ಲ ವ್ಯಕ್ತಿ ಎಂದರೆ ಬಾಳಾಚಾರ್ಯರು. ಪಾದಕ್ಕಿಗೆ ಒಂದು ಆತ್ಮವಿದ್ದರೆ ಅದನ್ನು ಬಾಳಾಚಾರ್ಯರಲ್ಲಿಯೇ ಹುಡುಕಬೇಕಾಗುತ್ತದೆ. ಜೀವಮಾನದ ಕೊನೆಯವರೆಗೂ ಪಾದಕ್ಕಿಯ ಉದ್ಧಾರಕ್ಕೆ ಒಕತಿಗ ಹೋರಾಟ ಮಾಡುತ್ತಾರೆ. ಪ್ರತಿನಿತ್ಯ ಪ್ರವಾಹದ ವಿರುದ್ಧ ಈಜುತ್ತಿದ್ದ ಆಚಾರ್ಯರು ಪಾದಕ್ಕಿಯ ಜೀವನವೆಂಬ ಹೊಳೆಯಲ್ಲಿ ಎದ್ದ ಈರ್ಷ್ಯೆ, ವೈರತ್ವ, ಮೋಸ, ಲೋಭ, ತಂತ್ರಗಾರಿಕೆ ಮೊದಲಾದ ಪ್ರವಾಹದ ವಿರುದ್ಧ ಜೀವನದ ಕೊನೆ ಕ್ಷಣದವರೆಗೂ ಈಜಿ ಕೊನೆಗೆ ಕೈಸೋತು ಹೋಗುತ್ತಾರೆ. ಬಾಳಾಚಾರ್ಯರು ತಮ್ಮ ಜೀವನದಲ್ಲಿ ಹಲವು ಅನ್ಯಾಯಗಳಿಗೆ ಊರ ಮುಖಂಡರೊಟ್ಟಿಗೆ ಕೈಜೋಡಿಸಿದ್ದರೂ ಕೂಡ ನಾನಾ ಸಾವಿನ ಸಂದರ್ಭದಲ್ಲಿ ಊರಿನಲ್ಲಿ ನಡೆದ ಪಂಚಾಯಿತಿ ಅಲ್ಲಿ ಊರ ಮುಖಂಡರ ದುಷ್ಟತನ, ಸ್ವಾರ್ಥಗಳು ತಮ್ಮ ಎಲ್ಲೆ ಮೀರಿದಾಗ ಅವರ ಮನಸ್ಸು ವಿಮುಖವಾಗುತ್ತದೆ. ಬಾಳಾಚಾರ್ಯರಿಗೆ ಶೇಷಪ್ಪನ ಕಾಯಿದೆ ಪಾಂಡಿತ್ಯವಾಗಲಿ, ಶಂಕರಪ್ಪಗೌಡರ ವರ್ಚಸ್ಸಾಗಲಿ ಇಲ್ಲದಿದ್ದರೂ ಸುತ್ತಮುತ್ತಲಿನ ಬದುಕನ್ನು ಕಣ್ಣಾರೆ ಕಂಡವರು. ಎಷ್ಟೇ ಪ್ರಯತ್ನಿಸಿದರೂ ಜೀವನ ತಮ್ಮ ಕೈಮೀರಿ ಹೋಗುತ್ತಿರುವುದನ್ನು ನೋಡಿದಾಗ ಈ ಜೀವನ ಮನುಷ್ಯನ ಅಂತಃ ಸತ್ವವನ್ನೇ ಪರೀಕ್ಷಿಸಲೆಂದು ನಿರ್ಮಿತವಾದ ಈಶ್ವರನ ಮಾಯೆಯಿರಬೇಕೆಂದು ಕೊಳ್ಳುತ್ತಾರೆ. ಮಗ ಮೊದಲೇ ಸತ್ತು ಹೋಗಿರುವುದರಿಂದ ಅವರಲ್ಲಿ ಸ್ವಾರ್ಥ ಸಾಧನೆಯ ಆಸೆ ಇಲ್ಲ. ಊರಿನ ಹಿತದ ಬಗ್ಗೆಯೇ ಚಿಂತಿಸುತ್ತಾರೆ. ಗೌಡರ ಮನೆತನದ ಮಾನ ಕಾಪಾಡಲು ಪ್ರಯತ್ನಿಸಿದ ಆಚಾರ್ಯರು ಏಕಾಂಗಿಯಾಗಿ ನಿಂತು ಪಡದಯ್ಯ ಮತ್ತು ಲಿಂಗಪ್ಪನನ್ನು ಎದುರಿಸುತ್ತಾರೆ. ಇಲ್ಲಿ ಅವರ ದಿಟ್ಟತನವನ್ನು ಗುರುತಿಸಬಹುದು. ಕೊನೆಗೆ

ಈರ್ಷ್ಯೆಯಿಂದ ಯಾರಿಗೂ ಸುಖವಿಲ್ಲವೆಂದರಿತ ಆಚಾರ್ಯರು ಗೌಡರಿಗೆ ಬುದ್ಧಿವಾದ ಹೇಳುತ್ತಾರೆ. ಇವರ ಹಿಂದಿನ ಉದ್ದೇಶವೂ ಕೂಡ ಊರಿನ ಜನರ ಹಿತರಕ್ಷಣೆ. ಇವರಿಗೆ ದಾದಾನ ಬಗೆಗೆ ವಿಶೇಷವಾದ ಒಲವು ಇದೆ. ಅಪಾಯದಲ್ಲಿ ಸಿಕ್ಕಿರುವ ದಾದಾನನ್ನು ಬಿಡಿಸಬೇಕೆಂಬ ಹಂಬಲ ಜೊತೆಗೆ ಈತನಿಂದಲೇ ಪಾದಳ್ಳಿಯ ಉದ್ಧಾರ ಸಾಧ್ಯವಾಗುತ್ತದೆಂಬ ನಂಬಿಕೆ ಆಚಾರ್ಯರದು.

ತನ್ನದಲ್ಲದ ಆಸ್ತಿಗೆ. ಸಂಪತ್ತಿಗೆ ಆಸೆ ಪಡುವುದು ತಪ್ಪು ಎಂಬ ಸಂದೇಶವನ್ನು ಕಾದಂಬರಿ ಸಾರುತ್ತದೆ. ಲಿಂಗಪ್ಪ. ಬಾಪುಸಾಹೇಬ. ಶೇಷಪ್ಪ. ಪಡದಯ್ಯ ಮೊದಲಾದವರೆಲ್ಲರೂ ಈ ಕೆಲಸಕ್ಕೆ ಕೈ ಹಾಕುತ್ತಾರೆ. ಲಿಂಗಪ್ಪಗೌಡರ ಆಸ್ತಿಯ ಮೇಲೆ. ಬಾಪುಸಾಹೇಬ- ವಾಡೆಯ ಆಸ್ತಿ. ಶೇಷಪ್ಪ- ದೇಶಪಾಂಡೆ ಮನೆತನದ ಆಸ್ತಿ. ಪಡದಯ್ಯ- ಮಠದ ಆಸ್ತಿ ಮತ್ತು ಚಿಮಣಾಳ ಆಸ್ತಿ..... ಹೀಗೆ ಇವರೆಲ್ಲರ ನಡವಳಿಕೆಗಳು ನಮ್ಮ ಸಂಸ್ಕೃತಿಯ ಹಿನ್ನೆಡೆಯನ್ನು ಬಿಂಬಿಸುತ್ತವೆ.

ದಾದಾನ ಬಗ್ಗೆ ಲೇಖಕರಿಗೆ ಅತೀವ ಪ್ರೀತಿಯಿದೆ. ಅದನ್ನು ಲೇಖಕರು ಮೊದಲೇ ಪ್ರಸ್ತಾಪ ಮಾಡುತ್ತಾರೆ. "ದಾದಾ ಎಂಬ ಒಬ್ಬ ವ್ಯಕ್ತಿಯ ಸಾಹಸಮಯ ಜೀವನದ ಸುತ್ತಲೂ ಒಂದು ಕತೆಯನ್ನು ಕಟ್ಟಬೇಕೆಂದು ನನ್ನ ಹಂಬಲವಿತ್ತು" ಎನ್ನುತ್ತಾರೆ. ಅದರಂತೆಯೇ ದಾದಾನ ಸಾಹಸಗಳು ಕಾದಂಬರಿಯಲ್ಲಿ ಸಾಕಷ್ಟು ಇದೆ. ಅವನ ವ್ಯಕ್ತಿತ್ವ. ಧೈರ್ಯ. ಸಾಹಸಗಳು ನಮ್ಮ ಮನಸ್ಸಿನಲ್ಲಿ ನಿಲ್ಲುವಂತೆ ಒತ್ತುಕೊಟ್ಟು ಚಿತ್ರಿಸುತ್ತಾರೆ. ಗೌಡರ ಹೊಲವನ್ನು ಲೂಟಿ ಮಾಡಿದಾಗ ಅದನ್ನು ತಡೆಯುವ ಸಂದರ್ಭ. ಬೇಟೆಯ ಪ್ರಸಂಗ, ಹೋಳಿ ಹುಣ್ಣಿಮೆ, ಕಾರಹುಣ್ಣಿಮೆ, ಮಹಾರಾಜರನ್ನು ಅಪಾಯದಿಂದ ಪಾರು ಮಾಡಿದ್ದು ......... ಹೀಗೆ ಹಲವು ಘಟನೆಗಳು ದಾದಾನ ಸಾಮರ್ಥ್ಯವನ್ನು ಪರಿಚಯಿಸುತ್ತವೆ. ಇದಲ್ಲದೆ ಊರಲ್ಲಿ ನಡೆಯುವ ಯಾವುದೇ ದುರ್ಘಟನೆಯ ಸಂದರ್ಭದಿಂದ ದಾದಾನನ್ನು ಪಾರು ಮಾಡಲು ಪ್ರಯತ್ನಿಸುತ್ತಾರೆ. ಇಡೀ ಪಾದಳ್ಳಿ ದಾರುಣ ದುರಂತಕ್ಕೆ ಒಳಗಾದ ತರುವಾಯ ದಾದಾ ಪಾದಳ್ಳಿಯನ್ನು ಪ್ರವೇಶಿಸುವುದು, ಮತ್ತೆ ಪಾದಳ್ಳಿಯ ಸತ್ವ ತಿರುಗಿ ಬರುತ್ತದೆ. ದಾದಾನಿಂದ ಮುಂದೆ ಪಾದಳ್ಳಿಯ ಭವಿಷ್ಯ ಉಜ್ವಲವಾಗುತ್ತದೆಂಬ ಆಶಾಭಾವನೆಯೊಂದಿಗೆ ಕಾದಂಬರಿ ಮುಕ್ತಾಯವಾಗುತ್ತದೆ.

ಸರ್ಕಾರಿ ಅಧಿಕಾರಿಗಳ ದರ್ಪಯುತವಾದ ಅಧಿಕಾರ. ಲಂಚಗುಳಿತನ. ಭ್ರಷ್ಟಾಚಾರ. ಅವರು ಬಡವರನ್ನು ಶೋಷಿಸುವ ರೀತಿ ಇವೆಲ್ಲವು ಇಂದಿನ ಪರಿಸ್ಥಿತಿಗೆ ಕನ್ನಡಿ ಹಿಡಿದಂತಿವೆ. ಶೇಷಪ್ಪ ತನ್ನ ಸ್ವಾರ್ಥ ಸಾದನೆಗಾಗಿ ಯಾರನ್ನು ಬೇಕಾದರೂ ಇಕ್ಕಟ್ಟಿಗೆ ಸಿಲುಕಿಸುವ ತನಗೆ ಅನುಕೂಲಕ್ಕೆ ತಕ್ಕಂತೆ ಬದಲಾಯಿಸುವುದು. ರಾಜಕೀಯ ತಂತ್ರಗಾರಿಕೆಗಳು ಪ್ರಸ್ತುತ ಸಮಾಜದ ರಾಜಕಾರಣಿಗಳನ್ನು ನೆನಪಿಗೆ ತರುತ್ತದೆ.

ಬಾಳಾಚಾರ್ಯರಲ್ಲಿರುವ ವಿವೇಕ. ಶಂಕರಪ್ಪಗೌಡರ ಕ್ಷಾತ್ರಗುಣ. ಪಾರ್ವತೆಪ್ಪನ ಅಭಿಮಾನ. ಶೇಷಪ್ಪನ ಬುದ್ಧಿಶಕ್ತಿ. ಯಶವಂತರಾಯರ ದಯಾಳುತನ. ಶಿವಲಿಂಗಸ್ವಾಮಿಗಳ ಶೀಲ. ದಾದಾನ ಸಾಹಸ. ಧೈರ್ಯ ಹೀಗೆ ಅನೇಕ ಮೌಲ್ಯಗಳನ್ನು ಕಾದಂಬರಿಯಲ್ಲಿ ಕಾಣಬಹುದಾದರೂ ಕೂಡ ಜೀವನದ ಪ್ರವಾಹದಲ್ಲಿ ಆ ಮೌಲ್ಯಗಳೆಲ್ಲವೂ ನಿರ್ವೀರ್ಯವಾಗುತ್ತವೆ. ಶಂಕರಪ್ಪಗೌಡ. ದಾದಾ. ಪಡದಯ್ಯ. ಶೇಷಪ್ಪ ಇವರೆಲ್ಲ ಅದ್ಭುತ ಕಾರ್ಯಸಾಮರ್ಥ್ಯವುಳ್ಳವರಾಗಿದ್ದರೂ ಕೂಡ ಅವು ಪಾಡಳ್ಳಿಯ ಉದ್ಧಾರಕ್ಕೆ ಉಪಯೋಗವಾಗುವುದಿಲ್ಲ.

ಒಟ್ಟಾರೆಯಾಗಿ 'ಗ್ರಾಮಾಯಣ' ಕಾದಂಬರಿಯ ವರ್ಣನವೆಂದರೆ 'ದುರಂತ'. ಸಂಕ್ರಮಣಾವಸ್ಥೆಯ ಜೀವನದ ನೋವಿನ ದಾರುಣತೆಯನ್ನು. ವಿಷಮತೆಯನ್ನು ಅತ್ಯಂತ ಯಶಸ್ವಿಯಾಗಿ ಚಿತ್ರಿಸಿದೆ. ಶಾಂತಿ, ಸಂತೃಪ್ತಿ, ಶ್ರದ್ಧೆಗಳ ಬೀಡಾಗಿ ಬಾಳುತ್ತಿದ್ದ ಹಳ್ಳಿಯೊಂದು ಸ್ವಾರ್ಥ ಪಿಶಾಚಿಗಳ ಕುಟಿಲ ಕಾರಸ್ಥಾನದಿಂದ ನರಕ ಸದೃಶವಾದ ದುರಂತ ಗಂಭೀರ ಕೃತಿ ಇದಾಗಿದೆ.

**ಅಡಿಟಿಪ್ಪಣಿ :**

೧. ರಾವಬಹದ್ದೂರ, ಗ್ರಾಮಾಯಣ. (ಮುನ್ನುಡಿ) ಪು.೦೮

೨. ಅದೇ. ನನ್ನ ಮಾತು, ಪು-೧೯

೩. ಅದೇ (ಮುನ್ನುಡಿ) ಪು-೦೮.

# ಅಧ್ಯಾಯ-೩

# ಸನ್ನಿವೇಶ ರಚನೆ

ಕ್ರಿಯೆಯ ಬೆಳವಣಿಗೆ, ಪಾತ್ರವಿಕಾಸ ಮತ್ತು ಘಟನಾವಳಿಗಳ ಸಂವಿಧಾನಾತ್ಮಕ ಅಳವಡಿಕೆಯ ದೃಷ್ಟಿಯಿಂದ ಗ್ರಾಮಾಯಣ ಕಾದಂಬರಿಯ ಸನ್ನಿವೇಶಗಳನ್ನು ಅಭ್ಯಸಿಸುವುದು ಅವಶ್ಯಕ. ಇದು ಒಟ್ಟಾರೆ ಕವಿಯ ಕಥನ ಕೌಶಲಕ್ಕೆ ಸಂಬಂಧಿಸಿದ ವಿಷಯ. 'ಗ್ರಾಮಾಯಣ' ಕಾದಂಬರಿಯಲ್ಲಿ ಲೇಖಕರು ಗ್ರಾಮೀಣ ಜೀವನದ ಸಮಗ್ರ ಚಿತ್ರಣವನ್ನು ಆದಷ್ಟು ವಾಸ್ತವವಾಗಿ ನಿರೂಪಿಸಲು ಪ್ರಯತ್ನಿಸಿದ್ದಾರೆ. ಪಾದಕ್ಕಿಯ ದುರಂತ ಚಿತ್ರಣವೇ ಕಾದಂಬರಿಯ ವಸ್ತು ವಿಷಯವಾಗಿದೆ. ಇದನ್ನು ಚಿತ್ರಿಸುವ ಸಲುವಾಗಿ ಘಟನೆಗಳು ಒಂದರ ಹಿಂದೆ ಒಂದರಂತೆ ನಡೆಯುತ್ತವೆ. ಅಲ್ಲದೆ ಒಂದು ಘಟನೆಯ ಒಡಲಿನಿಂದ ಹಲವು ಘಟನೆಗಳು ಕವಲೊಡೆಯುತ್ತಾ ಸಾಗಿವೆ. ವಾಡೆಯ ಕಲಹ, ಚಿಮಣಾಳ ಅತ್ಯಾಚಾರ, ನಾನಾನ ಕೊಲೆ, ಪುತಳಾಬಾಯಿಯ ಆತ್ಮಹತ್ಯೆ, ಶಂಕರಗೌಡರ ಸಾವು, ಕಾಲರಾ, ಪ್ಲೇಗು, ನೆರೆಹಾವಳಿ ಮುಂತಾದ ಪ್ರಕೃತಿ ವಿಕೋಪಗಳು, ಸರ್ಕಾರಿ ಅಧಿಕಾರಿಗಳ ಆಗಮನ ಮತ್ತು ಅವರು ತೆಗೆದುಕೊಂಡ ನಿರ್ಣಯಗಳು, ಲಿಂಗಪ್ಪಗೌಡನ ವಾರಸ ಪ್ರಕರಣ, ಪಡದಪ್ಪನ ನೇತೃತ್ವದಲ್ಲಿ ನಡೆದ ಲೂಟಿ, ಮೊದಲಾದ ನೀಚಕೃತ್ಯಗಳು, ಪಾರ್ವತವ್ವ, ಲಿಂಗಪ್ಪಗೌಡ, ಚಿಮಣಾಳ ಅಂತ್ಯ, ಬಾಳಾಚಾರ್ಯರ ಸಾವು ಪಾದಕ್ಕಿಯಲ್ಲಿ ನಡೆದ ಹಲವು ಉತ್ಸವಗಳು– ಹೀಗೆ ಹತ್ತಾರು ಘಟನೆಗಳು ಬೃಹತ್ ಕಾದಂಬರಿಯ ತುಂಬ ಹರಡಿಕೊಂಡಿವೆ. ಆದರೆ ಕೆಲವು ಘಟನೆಗಳನ್ನು ಮಾತ್ರ ಸನ್ನಿವೇಶ ರಚನೆಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಚಿಮಣಾಳ ಶೀಲಭಂಗದ ಪ್ರಸಂಗ, ನಾನಾ ಮತ್ತು ಪುತಳಾ ಪ್ರಸಂಗ, ಕಾದಂಬರಿಯಲ್ಲಿ ಚಿತ್ರಣಗೊಂಡಿರುವ ಸಾವು, ಪಾದಕ್ಕಿಗೆ ಅಧಿಕಾರಿಗಳು ಬಂದ ಪ್ರಸಂಗ– ಈ ನಾಲ್ಕು ಘಟನೆಗಳು ಪ್ರಮುಖವಾಗಿದ್ದು, ಕಾದಂಬರಿಯಲ್ಲಿನ ಬಹುಪಾಲು ಪಾತ್ರಗಳೆಲ್ಲವು ಇಲ್ಲಿ ಪಾಲ್ಗೊಳ್ಳುತ್ತವೆ.

## ಚಿಮಣಾಳ ಶೀಲಭಂಗದ ಪ್ರಸಂಗ

ಚಿಮಣಾಳ ಮೇಲೆ ನಡೆದ ಅತ್ಯಾಚಾರ ಕಾದಂಬರಿಯ ಕೇಂದ್ರ ಘಟನೆಯಾಗಿದೆ. ಕಾದಂಬರಿಯ ಮುಂದಿನ ಘಟನೆಗಳೆಲ್ಲಾ ಬಹುಮಟ್ಟಿಗೆ ಇದರ ಪ್ರತಿಫಲಗಳೆಂಬಂತೆ ಜರುಗುತ್ತಾ ಹೋಗುತ್ತವೆ. ಇದಕ್ಕಿಂತ ಮುಂಚಿತವಾಗೇ ನಡೆಯುವ ಪುತಳಾಬಾಯಿಯ ಶೀಲನಷ್ಟವೇ ಕೇಂದ್ರ ಘಟನೆ ಎಂದೂ, ಇದು ನಂತರದ ಘಟನೆಯೆಂದು ಹೇಳಿದರೂ ಕೂಡ ಚಿಮಣಾಳ ಶೀಲಭಂಗಕ್ಕೂ ಪುತಳಾಳ ಸಾವಿಗೂ ಒಂದು ನಿಕಟವಾದ ಸಂಬಂಧವಿದೆ.

ಚಿಮಣಾಳು ಪುತಳಾಬಾಯಿಯ ರಕ್ಷಣೆಗೆ ಬರುತ್ತಿದ್ದಂತೆ ಅವಳ ಅತ್ಯಾಚಾರವಾಗುತ್ತದೆ. ಅದರ ಹೊಣೆಗಾರಿಕೆ ಪುತಾಳಾ ಮೇಲೆ ಬೀಳುತ್ತದೆ. ಮುಂದೆ ನಾನಾ ಸಾವು. ದಾದಾನ ಬಂಧನ. ಕೊನೆಗೆ ಪುತಳಾಬಾಯಿಯ ಸಾವು. ವಾಡೆಯ ಅತಂತ್ರ ಸ್ಥಿತಿ. ಎರಡು ಬಣಗಳಾಗಿ ಮಾರ್ಪಟ್ಟ ಪಾದಕ್ಕಿ ಈ ಎಲ್ಲಾ ಘಟನೆಗಳಿಗೆ ಮೂಲ ಕಾರಣವಾಗುತ್ತದೆ.

ಇಲ್ಲಿ ಒಂದು ಘಟನೆ ಮತ್ತೊಂದು ಘಟನೆಯೊಳಗಿಂದಲೇ ಕವಲೊಡೆಯುತ್ತದೆ. ಯಾವೊಂದು ಘಟನೆಯನ್ನು ಪ್ರತ್ಯೇಕವಾಗಿ ನಿಲ್ಲಿಸಲು ಸಾಧ್ಯವಿಲ್ಲ. ಒಂದು ರೀತಿಯ ದುರಂತ ಘಟನೆಗಳ ಸರಮಾಲೆಯೇ ಗ್ರಾಮಾಯಣವಾಗಿದೆ ಎಂದರೂ ತಪ್ಪಾಗಲಾರದು. ಚಿಮಣಾಳ ಶೀಲಭಂಗ ಪ್ರಕರಣವು ಕಾದಂಬರಿಯಲ್ಲಿ ಹಲವು ತಿರುವು ಪಡೆದುಕೊಳ್ಳಲು ಕಾರಣವಾಗುತ್ತದೆ. ಹಾಗಾಗಿ ಈ ಪ್ರಸಂಗಕ್ಕೆ ಪರಿಣಾಮದ ತೀವ್ರತೆ ಮತ್ತು ರೋಚಕತೆಗಳಲ್ಲಿ ಪುತಳಾಬಾಯಿಯ ಪ್ರಸಂಗಕ್ಕಿಂತ ಮಿಗಿಲಾದ ಸಾಮರ್ಥ್ಯ ಒದಗಿದೆ.

ಈ ಘಟನೆಗೆ ಕಾರಣನಾದ ಪಡದಪ್ಪ ಹೊರಗಿನವನು ಮಾತ್ರವಲ್ಲ. ಪಾದಕ್ಕಿಯ ಹಿರೇಮಠದ ಅಧಿಪತಿ. ಲೌಕಿಕ ಜೀವನದ ಎಲ್ಲ ಆಸೆ-ಆಕಾಂಕ್ಷೆಗಳನ್ನು ತ್ಯಜಿಸಿ ವಿರಕ್ತನಾಗಿರಬೇಕಿದ್ದ ಪಡದಪ್ಪ 'ಮಠಾಧಿಪತಿ' ಎಂಬ ಪವಿತ್ರ ಸ್ಥಾನದಲ್ಲಿದ್ದುಕೊಂಡು ಒಂದು ಹೆಣ್ಣಿನ ಮಾನಭಂಗಕ್ಕೆ ಕಾರಣನಾಗಿರುವುದು ಇಡೀ ಸಮಾಜವೇ ತಲೆತಗ್ಗಿಸುವಂತದ್ದು. ಚಿಮಣಾಳನ್ನು ಆಸೆಪಟ್ಟ ಬಾಪುಸಾಹೇಬ ಆಕೆಯನ್ನು ತನ್ನವಳನ್ನಾಗಿ ಮಾಡಿಕೊಳ್ಳಲು ಪಡದಪ್ಪನ ಸಹಾಯವನ್ನು ಬೇಡುತ್ತಾನೆ. ಚಿಮಣಾಳನ್ನು ಕರೆತರಲು ಕಳುಹಿಸಿದ ದಾನವ್ವ ಆಕೆಯೊಬ್ಬಳನ್ನೇ ಕೂಡಿಸಿಕೊಂಡು ಸವಿಮಾತುಗಳಿಂದ ಬಾಪು ಸಾಹೇಬನ ರೂಪ, ಸಂಪತ್ತು, ಅಧಿಕಾರ ಇವನ್ನೆಲ್ಲ ಬಣ್ಣ ತುಂಬಿ ಬಣ್ಣಿಸುತ್ತಾಳೆ. "ನೀ ಹೂಂ ಅನ್ನು. ನಿಮ್ಮ ಅಪ್ಪ ಬಂದ ವಾರದಾಗ ಮದುವೆ ಆಗದಿದ್ದರೆ ನನ್ನ ಹೆಸರ ಕರೀಬ್ಯಾಡ. ಅದರ ಹೊರೀ ಎಲ್ಲಾ ಸ್ವಾಮೇರ್ದು ಕೂಡ್ಯೈತಿ. ಬಾಪುಸಾಹೇಬ ಕೈ ಹಿಡಿದರ ಊರ ಮುಂದೆಲ್ಲ ನಿನ್ನ ಕಾಲಿಗೆ ಬೀಳತಾರು......ಸ್ವತಃ ಬಾಪೂಸಾಬರು ಬಂದು ಸ್ವಾಮೇರ ಪಾದಾಮುಟ್ಟಿ. ಲಗ್ನಕ್ಕೆ ನಿನ್ನ ಒಪ್ಪಸೂ ಹಾಗಾ ಮಾಡ್ರಿ ಅಂತ ಹೇಳಿಕೊಂಡಾರು. ಸ್ವಾಮೇರ ಹೇಳಿದ ಮಾತು ಯಾರ ಅಪ್ಪ ಬಂದರೂ ಮೀರಾಕಿಲ್ಲ. ಅಂತ ಆಣೇ ಮಾಡ್ಯಾರು. ಬೇಕಾರ ಸ್ವಾಮೀರ ಬಾಯಿಂದನ ಈ ಮಾತ ಕೇಳಿಯಂತ ನಡೀ ಒಳ್ಯಾಕ" ಎನ್ನುತ್ತ ದಾನವ್ವ ಚಿಮಣಾಳನ್ನು ಮರಳು ಮಾಡಿ ಉಪಾಯದಿಂದ ಮಠದೊಳಗೆ ಕರೆದೊಯ್ಯುತ್ತಾಳೆ. ಯಂತ್ರದಂತೆ ದಾನವ್ವನನ್ನು ಅನುಸರಿಸಿ ಒಳಹೋದ ಚಿಮಣಾಳನ್ನು 'ಬಾ ಮಗಳು ಬಾ ದೊಡ್ಡವರ ಕೈಹಿಡಿದು ನಿನ್ನ ದೈವ ತೆರೀಲಿ' ಎಂದು ಪಡದಪ್ಪ ಆಶೀರ್ವದಿಸುವ ನಾಟಕವಾಡುತ್ತಾನೆ. ಬಾಪು ಸಾಹೇಬನನ್ನು ಕರೆತರಲು ಹೇಳಿ ದಾನವ್ವನನ್ನು ಹೊರಗೆ ಕಳುಹಿಸಿ ಚಿಮಣಾ. ಒಬ್ಬಳನ್ನೇ ಮಠದಲ್ಲಿರಿಸಿಕೊಳ್ಳುತ್ತಾನೆ. ಈ ಸಂದರ್ಭದಲ್ಲಿ

ನಡೆದ ಘಟನೆಯನ್ನು ಲೇಖಕರು ವಿವರಿಸುವುದಿಲ್ಲ. “ದಾನವ್ವ ಹೊರಟು ಹೋದಳು. ಸ್ವಾಮಿಗಳು ವಿಚಾರಮಗ್ನರಾದಂತೆ ಗದ್ದ ತಿಕ್ಕುತ್ತ ಕುಳಿತರು. ಏನೂ ತಿಳಿಯದವಳಾಗಿ ಚಿಮಣಾ ವಡದಯ್ಯನವರ ಬಲಗಿವಿಯಲ್ಲಿದ್ದ ಬಂಗಾರದಲ್ಲಿ ಕಟ್ಟಿದ್ದ ದೊಡ್ಡ ರುದ್ರಾಕ್ಷಿಯನ್ನೇ ನೋಡುತ್ತಿದ್ದಳು.” ಎಂದಷ್ಟೆ ಹೇಳುತ್ತಾರೆ. ಲೇಖಕರು ಪ್ರತಳಾಬಾಯಿಯ ಶೀಲನಷ್ಟದ ಪ್ರಸಂಗವನ್ನು ವಿವರಿಸುವಷ್ಟು ಚಿಮಣಾಳ ಪ್ರಸಂಗವನ್ನು ವಿವರಿಸುವುದಿಲ್ಲ. ಮಠದಲ್ಲಿ ನಡೆದದ್ದಾರು ಏನು ? ಎಂಬುದು ಪ್ರತಳಾಳ ಮಾತಿನಿಂದ ಓದುಗರ ತಿಳಿವಿಗೆ ಬರುತ್ತದೆ. “ನೀ ಆಕೆನ್ನ ಲಗ್ನ ಆಗತೀನಿ ಅಂತ ಘುಲಾಮಿ ತುಂಬಿ ಮಠಕ್ಕ ಕರೆಸಿಕೊಂಡು ಆ ತ್ವಾಳನ ಕೈಯಾಗ ಕೊಟ್ಟು ಬಂಗಾರದಂತಾ ಹುಡುಗಿನ್ನ ಹಾಳುಗೆಡವಿಟ್ಟ” ಎನ್ನುತ್ತಾಳೆ.

ವಡದಪ್ಪನ ಈ ಕೃತ್ಯ ಮಾನವೀಯತೆಗೂ ವಿರುದ್ಧವಾದುದು. ಆದ್ದರಿಂದ ವಡದಪ್ಪನೇ ಎಲ್ಲಾ ಸಮಸ್ಯೆಗಳ ಕೇಂದ್ರವಾಗುತ್ತಾನೆ. ಚಿಮಣಾಳ ಶೀಲಭಂಗದ ವಿಚಾರ ಊರ ತುಂಬ ಹರಡುತ್ತದೆ. ಊರ ಹಿರಿಯರಾಗಲಿ, ಅಣ್ಣನಾದ ದಾದಾ ಆಗಲಿ, ಆಕೆಯ ರಕ್ಷಣೆಯ ಜವಾಬ್ದಾರಿ ಹೊತ್ತಿದ್ದ ಪುತಳಾಬಾಯಿಯಾಗಲಿ ಯಾರೂ ಕೂಡ ಆಕೆಯ ಮೇಲಾದ ಅನ್ಯಾಯವನ್ನು ಪ್ರತಿಭಟಿಸುವ ಅಥವಾ ಅದರಿಂದ ಹುಟ್ಟಿಕೊಂಡ ಸಮಸ್ಯೆಯನ್ನು ಪರಿಹರಿಸುವ ನಿಟ್ಟಿನಲ್ಲಿ ಯೋಚಿಸದೆ ತಮ್ಮ ಹೊಣೆಗೇಡಿತನವನ್ನು ಪ್ರದರ್ಶಿಸುತ್ತಾರೆ. ಬಾಪುಸಾಹೇಬನ ಆಸೆ, ವಡದಪ್ಪನ ನೀಚತನ, ದಾದಾನ ದುಡುಕುತನ ಮತ್ತು ಅವಿವೇಕಯುತ ನಿರ್ಧಾರಗಳ ಘೋರ ಪರಿಣಾಮವನ್ನು ಚಿಮಣಾ ಜೀವನದುದ್ದಕ್ಕೂ ಅನುಭವಿಸಬೇಕಾಗುತ್ತದೆ.

ಚಿಮಣಾ ತನ್ನ ಮೇಲೆ ಅನಿರೀಕ್ಷಿತವಾಗಿ ಆಕ್ರಮಣ ಮಾಡಿದ ವಡದಪ್ಪನ ಮೇಲಾಗಲಿ ಅಥವಾ ಆತನಿಂದ ತನ್ನ ಬದುಕಿನಲ್ಲಿ ಎದುರಾದ ಸಮಸ್ಯೆಗಳನ್ನು ಧೈರ್ಯವಾಗಿ ಎದುರಿಸಲು ಸಾಧ್ಯವಾಗದೆ ಅಸಹಾಯಕಳಾಗುತ್ತಾಳೆ. ಈ ಅಸಹಾಯಕತೆಯೇ ಜೀವನದುದ್ದಕ್ಕೂ ವ್ಯಾಪಿಸಿಕೊಂಡು ಆವಳನ್ನು ಕತ್ತಲಕೋಣೆಗೆ ನೂಕುತ್ತದೆ.

ಬಾಪುಸಾಹೇಬ, ವಡದಪ್ಪ ಇವರಲ್ಲದೆ ಲಿಂಗಪ್ಪಗೌಡನೂ ಕೂಡ ಈಕೆಯ ಜೀವನದಲ್ಲಿ ಪ್ರವೇಶಿಸುತ್ತಾನೆ. ಆಕೆಯನ್ನು ತನ್ನವಳನ್ನಾಗಿ ಮಾಡಿಕೊಳ್ಳಲು ಪ್ರಯತ್ನಿಸಿ ವಿಫಲನಾಗಿದ್ದಲ್ಲದೆ ತನ್ನ ಮತ್ತು ಆಕೆಯ ದಾರುಣ ಅಂತ್ಯಕ್ಕೆ ಕಾರಣವಾಗುತ್ತಾನೆ. ಈ ಹಿನ್ನೆಲೆಯಲ್ಲಿ 'ಚಿಮಣಾಳ ರೂಪ ಹಾವಿನ ಹೆಡೆಯಲ್ಲಿನ ರತ್ನದಂತೆ' ಎಂಬ ಮಾತಿನ ಧ್ವನಿಶಕ್ತಿ ಅಪಾರವಾದದ್ದು. ಅಂತೂ ಪುರುಷರ ಮೇಲಾಟ ಹೆಣ್ಣೊಂದರ ಬದುಕನ್ನು ಅತಂತ್ರಗೊಳಿಸಿದ ಬಗೆಯನ್ನು ಮತ್ತು ಇಡೀ ವಾದಳ್ಳಿಯ ಮೇಲೆ ಅದು ಬೀರಿದ ಪರಿಣಾಮವನ್ನು ಲೇಖಕರು ಚಿತ್ರಿಸಿದ್ದಾರೆ.

**ನಾನಾ ಮತ್ತು ಪುತಳಾ ಪ್ರಸಂಗ:-**

ಈ ಪ್ರಸಂಗದ ಮೂಲ ಅಡಗಿರುವುದು ಲೈಂಗಿಕ ಪ್ರವರ್ತನೆಯಲ್ಲಿ. ನಾನಾನ ಕೊಲೆಗೂ, ಪುತಳಾಳ ಆತ್ಮಹತ್ಯೆಗೂ ಇದೇ ಕಾರಣವಾಗುತ್ತದೆ. ಈ ಪ್ರವರ್ತನೆ ಎರಡು ಬಾರಿ ಪುನರಾವರ್ತನೆಯಾಗುತ್ತದೆ. ಪುತಳಾ ತನ್ನ ಮದುವೆಯ ಮೆರವಣಿಗೆಯಲ್ಲಿ ಜಾಗೀರದಾರರ ಪರಿವಾರ ತಮ್ಮನ್ನು ಸ್ವಾಗತಿಸಲು ಬಂದಾಗ "ಸಹಜ ಕುತೂಹಲವೋ, ಹುಡುಗುತನದ ಕೌತುಕವೋ ಅಥವಾ ದೈವ ಪ್ರೇರಣೆಯೋ ಗೊತ್ತಿಲ್ಲ. ಮುಖದ ಮುಸುಕು ಸರಿಸಿ ತಾನು ನೋಡಿದ್ದಳು. ಪಿಲಾಲಿನ ಬೆಳಕಿನಲ್ಲಿ ಕಂಡದ್ದೇನು? ಬೆಟ್ಟದಷ್ಟು ಎತ್ತರವಾದ ಅಬಲಕ ಕುದುರೆಯ ಮೇಲೆ. ಜಾಗೀರದಾರರ ಶೀಲೇದಾರ ನಾನಾ. ಕೈಯಲ್ಲಿ ಬೆಚ್ಚುಗತ್ತಿಯನ್ನು ಹಿಡಿದು ಕುಳಿತಿದ್ದ. ಮುಗಿಲಬಣ್ಣದ ಜರದಪೇಟಾ. ಶುಭ್ರವಾದ ಕಂಠಿಕಮಾನಿನ ಅಂಗಿ. ಕಿವಿಯ ತನಕ ವಕ್ರವಾಗಿ ಬಾಗಿದ ಹುರಿಮೀಸೆ ಇತಿಹಾಸದ ಕ್ರಮವನ್ನು ತಪ್ಪಿಸಿ ಪ್ರಾಚೀನಕಾಲದ ಸರದಾರನೊಬ್ಬ ಮೆರವಣಿಗೆಯನ್ನು ನೋಡಬಂದತಿತ್ತು. ಆ ಒಂದು ನೋಟವೇ ತನ್ನ ಜೀವಮಾನವನ್ನೆಲ್ಲ ಸೆಳೆದುಕೊಂಡಿತ್ತು". ಪುತಳಾಬಾಯಿಯ ಈ ಆಸೆಯನ್ನು ಈಡೇರಿಸಿಕೊಳ್ಳುವ ಅವಕಾಶ ಆಕೆಯ ಪತಿಯಿಂದಲೇ ದೊರೆಯುತ್ತದೆ. ಪುತಳಾಳ ತಂದೆಗೆ ಕಾಯಿಲೆ ಬಿದ್ದ ಕಾರಣ ರಾಣೋಜಿರಾಯರು ಆಕೆಯನ್ನು ಅವರ ತವರು ಮನೆಗೆ ಬಿಟ್ಟು ಬರುವ ಕಾರ್ಯವನ್ನು ನಾನಾನಿಗೆ ವಹಿಸುತ್ತಾರೆ. ವಾಡೆಯಲ್ಲಿ ಅನೇಕ ಬಾರಿ ನಾನಾನ ನೋಡಿದಾಗಲೆಲ್ಲ ನವಿರೇಳುತ್ತಿದ್ದ ಮನಸ್ಸು ಈ ಸಂದರ್ಭವನ್ನು ಉಪಯೋಗಿಸಿಕೊಳ್ಳಲು ತವಕಿಸುತ್ತದೆ.

"ಗಾಡಿಯಲ್ಲಿ ತಾನು, ಯಮುನಾ, ನಾನಾ ಮೂವರೂ ಕುಳಿತು ಹೊರಟರು. ಬಿಸಿಲು ತಟ್ಟಬಾರದೆಂದು ಗಾಡಿಗೆ ಗುಡಾರದ ಸವಾರಿಯನ್ನು ಹಾಕಲಾಗಿತ್ತು. ನಡುದಾರಿಗೆ ಗಾಡಿ ಬಂದಿರಬೇಕು; ನಡುಮಧ್ಯಾಹ್ನದ ಬಿಸಿಲು ಮತ್ತೇರಿಸುವಂತಿತ್ತು. ಸುತ್ತಲಿನ ಬಯಲೆಲ್ಲ ಬಿಸಿಲಿಗೆ ಮೂರ್ಛೆ ಹೋದಂತಿತ್ತು. ಗಾಡಿಯಲ್ಲಿ ಯಮುನಾ ತೂಕಡಿಸುತ್ತಿದ್ದಳು. ಗಾಡಿಯ ಧಡಕಿಗೆ ತಾನು ನಾನಾನ ಮಗ್ಗಲಿಗೇ ಬಂದಿದ್ದಳು. ಅದೇನು ಹುಚ್ಚುವಿಚಾರ ಮೂಡಿತೋ ತಲೆಯಲ್ಲಿ ! ಯಮುನಾಳಿಗೆ ಮಲಗಲೆಂದು ಹೇಳಿದಳು. ಯಮುನಾಳಿಗೆ ಮಲಗಲು ಇಂಬಾಗಲೆಂದು ಇನ್ನೂ ನಾನಾನ ಹತ್ತಿರ ಸರಿದಳು. ಕಾಲು ಚಾಚುವಾಗ, ಸೆರಗು ಸರಿಪಡಿಸಿಕೊಳ್ಳುವಾಗ, ಗಾಡಿಯ ಧಡಕಿಗೆ ಮಗ್ಗುಲ ಬದಲಿಸುವಾಗ ಅನಿವಾರ್ಯವಾಗಿ ನಾನಾನ ಮೈಸೋಕುತ್ತಿತ್ತು. ಆಸೆಯ ಬೆಂಕಿ ತಂತಾನೆ ಹುಟ್ಟುತ್ತಿತ್ತು. ಒಮ್ಮೆ ನಾನಾನನ್ನು ಆಸೆಗಣ್ಣುಗಳಿಂದ ದಿಟ್ಟಿಸಿದಳು. ಕಣ್ಣುತುಂಬಾ ಆ ರೂಪವನ್ನು ತುಂಬಿಕೊಳ್ಳಬೇಕೆನಿಸಿತು. ಕೊನೆಗೆ ನಡುದಾರಿಗೆ ಹಳ್ಳ ಕಟ್ಟಿ ಸರಿರಾತ್ರಿಯವರೆಗೆ ಅಲ್ಲಿಯೇ ನಿಲ್ಲಬೇಕಾಯಿತು. ಹಳ್ಳ ಕ್ಷಣಕ್ಷಣಕ್ಕೂ ಏರುತ್ತಿತ್ತೇ ಹೊರತು ಇಳಿಯುತ್ತಿರಲಿಲ್ಲ."

ಈ ವಿವರಣೆಯಲ್ಲಿ ಬಂದಿರುವ 'ಹೊಳೆಯ ವಿರುಪಿಕೆ' ನಾನಾ ಮತ್ತು ಪುತಳಾಳಲ್ಲಿದ್ದ ಕಾಮಪರವಶತೆಯ ತೀವ್ರಗತಿಯನ್ನು, ಆ ಪರವಶತೆಯಲ್ಲಿ ಇಬ್ಬರ ಬುದ್ಧಿಹೀನತೆಯನ್ನು ಸಂಕೇತಿಸುತ್ತದೆ.

ಈ ಅನೈತಿಕವಾದ ಸಂಬಂಧ ಇಷ್ಟಕ್ಕೆ ನಿಲ್ಲದೆ ರಾಣೋಜಿರಾಯರ ಮರಣದ ನಂತರ ಮತ್ತೆ ಮರುಕಳಿಸುತ್ತದೆ. ನಾನಾ ತನ್ನ ಪತ್ನಿ ರುಕುಮಾ ಕಾಕುನ ಮರಣದ ನಂತರ ಎಲ್ಲ ಸುಖಕ್ಕೆ ವಿಮುಖನಾಗಿದ್ದ. ಆತನಲ್ಲಿ ಮತ್ತೆ ಸಂಬಂಧವನ್ನು ಬೆಳೆಸುವ ನಿರ್ಧಾರ ಮಾಡಿದ್ದು ಪುತಳಾಬಾಯಿ. ಹಿಂದೆ ಮಾಡಿದ ತಪ್ಪಿನ ಪುನರಾವರ್ತನೆ ಮುಂದಿನ ಘೋರ ದುರಂತಕ್ಕೆ ಕಾರಣವಾಗುವುದು ಗಮನಿಸಬೇಕಾದ ಅಂಶ. ಬಾಪು ಸಾಹೇಬನಿಂದ ತನ್ನ ಮಗಳಿಗಾದ ಅನ್ಯಾಯವನ್ನು ಸರಿಪಡಿಸುವಂತೆ ಪುತಳಾಬಾಯಿಯನ್ನು ಕೇಳಿಕೊಂಡ ನಾನಾ ಅದು ಸಾಧ್ಯವಾಗದ್ದನ್ನು ಕಂಡು ರೊಚ್ಚಿಗೇಳುತ್ತಾನೆ. ತನ್ನ ಮತ್ತು ಪುತಳಾಳ ನಡುವಿನ ಸಂಬಂಧವನ್ನು ಬಯಲಿಗೆಳೆಯುವುದಾಗಿ ಬೆದರಿಕೆ ಹಾಕುತ್ತಾನೆ. "ಹೇಳತೀನಿ ಕೇಳ ಪುತಳಾ. ಬಿಮಣಾಳ ಬಾಳೇವೆಲ್ಲ ಹಾಳಾತು. ಇನ್ನ ನಾ ಯಾರದು ದರಕಾದ ಮಾಡೂದಿಲ್ಲ. ನನ್ನ ನಿನ್ನ ಸಂಬಂಧ ಏನೈತೆಲ್ಲ ಅದನ್ನ ಊರ ತುಂಬ ಹೇಳಿಕೊಂತ ತಿರಿಗ್ಯಾಡತೇನಿ"[1] ಎಂದ ನಾನಾನ ಮಾತನ್ನು ಕೇಳಿದ ಪುತಳಾ ಮುಂದೆ ಎದುರಾಗುವ ಮರ್ಯಾದೆಗೇಡಿನ ಜನನಿಂದೆಗೆ ಹೆದರಿ ಊಟದಲ್ಲಿ ವಿಷಬೆರಸಿ ಹತ್ಯೆ ಮಾಡುತ್ತಾಳೆ. ಈ ಘಟನೆ ಇಷ್ಟಕ್ಕೆ ನಿಲ್ಲದೆ ಪಾದಳ್ಳಿಯಲ್ಲಿ ಒಂದು ಅನರ್ಥ ಪರಂಪರೆಯನ್ನೇ ಹುಟ್ಟು ಹಾಕುತ್ತದೆ. ನಾನಾನ ಕೊಲೆಯ ಆರೋಪ ಬಾಪುಸಾಹೇಬನ ಮೇಲೆ ಬೀಳುತ್ತದೆ. ಇದರಿಂದ ಪಾರಾಗಲು ದೈವದ ಸಭೆಗೆ ಲಂಚ ನೀಡುತ್ತಾನೆ. ಕಾನೂನು ಬಾಹಿರವಾದ ಕೊಲೆಯಂಥ ಅಪರಾಧವನ್ನು ಮುಚ್ಚಿಹಾಕುವಂತಹ ನೀಚಕಾರ್ಯದಲ್ಲಿ ಊರ ಹಿರಿಯರೆಲ್ಲ ಭಾಗಿಯಾಗುವ ಮೂಲಕ ಹಿಂದಿನಿಂದಲೂ ನಂಬಿಕೊಂಡು ಬಂದಿದ್ದ ಮೌಲ್ಯಗಳ ಅಧಃಪತನಕ್ಕೆ ಕಾರಣವಾಗುತ್ತಾರೆ. ಇದು ಸಾಂಸ್ಕೃತಿಕ ಮೌಲ್ಯಗಳ ಹಿನ್ನಡೆಯೂ ಆಗಿದೆ. ಹಣ ಸುಲಿಯುವ ಮೂಲಕ ಕಾನೂನಿಗಷ್ಟೇ ಅಲ್ಲದೆ ಊರಿನ ಸಮೂಹಕ್ಕೆ ದ್ರೋಹ ಬಗೆದ ಸಂಗತಿ ನಾನಾನ ಪ್ರಕರಣದಿಂದ ಬಹಿರಂಗಗೊಳ್ಳುತ್ತದೆ. ಇಲ್ಲಿ ಉದ್ಭವವಾಗುವ ಗೊಂದಲ, ಈರ್ಷ್ಯೆಗಳಿಂದ ಬಾಳಾಚಾರ್ಯರು ರೋಸಿಹೋಗುತ್ತಾರೆ. ಇಲ್ಲಿಂದೀಚೆಗೆ ಊರು ಎರಡು ಬಣಗಳಾಗಿ ವಿಭಾಗಗೊಳ್ಳುತ್ತದೆ.

ಮುಂದೆ ಇದೇ ಆರೋಪ ಪಡದಪ್ಪನ ಕುತಂತ್ರದಿಂದ ದಾದಾನ ಮೇಲೆರಗುತ್ತದೆ. ತನ್ನ ತಪ್ಪಿಗೆ ನಿಷ್ಪಾಪಿ ದಾದನ ಬಲಿಯಾಗುತ್ತದೆಂದು ತಿಳಿದ ಪುತಳಾ ತನ್ನ ಪಾಪಕೃತ್ಯಕ್ಕೆ ಪ್ರಾಯಶ್ಚಿತ್ತವಾಗಿ ತಾನೇ ಆತ್ಮಹತ್ಯೆ ಮಾಡಿಕೊಳ್ಳಲು ನಿರ್ಧರಿಸುತ್ತಾಳೆ. ಈ ಸಂದರ್ಭದಲ್ಲಿ

ಪ್ರವೇಶಿಸುವ ಯಾರೂ ಸುಖಾಂತದಲ್ಲಿ ತಮ್ಮ ಜೀವನವನ್ನು ನೆಲೆಗೊಳಿಸಿಕೊಳ್ಳಲು ಆಗುವುದಿಲ್ಲ. ರಾಣೋಜಿರಾಯ ಘೋರ್ಪಡೆ, ಪುತಳಾಬಾಯಿಯ ತಂದೆ, ನಾನಾ, ಪುತಳಾಬಾಯಿ, ಶಂಕರಗೌಡ, ಬಾಳ್ಯಾ ಮತ್ತು ಆತನ ಕುಟುಂಬ, ನಾರಾಯಣಾಚಾರಿ, ಬಾಳಾಚಾರ್ಯರು ಮತ್ತು ಅವರ ಪತ್ನಿ, ಪಾರ್ವತವ್ವ, ಚಿಮಣಾ, ಲಿಂಗಪ್ಪಗೌಡ, ಇವರೆಲ್ಲರು ಸಾವಿನ ಕಡೆ ಮುಖ ಮಾಡಿದವರು. ರಾಣೋಜಿರಾಯರು ಕುದುರೆ ಮೇಲಿಂದ ಬಿದ್ದ ನೆಪವಾಗಿ ಕಾಯಿಲೆ ಬಿದ್ದು ಮರಣ ಹೊಂದುತ್ತಾರೆ. ನಾನಾ ಕೊಲೆಗೀಡಾಗುತ್ತಾನೆ. ಶಂಕರಗೌಡ, ನಾರಾಯಣಾಚಾರಿ, ಬಾಳ್ಯ ಮತ್ತು ಅವನ ಕುಟುಂಬ, ಪಾರ್ವತವ್ವ, ನಾರಾಯಣಾಚಾರಿ, ಲಿಂಗಪ್ಪಗೌಡ ಇವರಲ್ಲಿ ಕೆಲವರು ಕಾಲರಕ್ಕೆ ಮತ್ತೆ ಕೆಲವರು ಪ್ಲೇಗಿಗೆ ತುತ್ತಾಗುತ್ತಾರೆ. ಬಾಳಾಚಾರ್ಯರು ಅಪಘಾತಮರಣಕ್ಕೀಡಾದರೆ ಚಿಮಣಾ ಮತ್ತು ಪುತಳಾಬಾಯಿ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ಇಲ್ಲಿ ಬರುವ ಎಲ್ಲಾ ಪಾತ್ರಗಳು ಸಾವಿನಂಚಿಗೆ ಬಂದಾಗ ತಮ್ಮ ಗುಣ, ಸ್ವಭಾವದಲ್ಲಿ ಬದಲಾಗುತ್ತಾರೆ. ಗೌಡಿಕೆಯ ದರ್ಪದಿಂದ ಕೊಬ್ಬಿ, [illegible] ಸಿದ್ಧವಿದ್ದ ಶಂಕರಗೌಡರು ಬಾಳ್ಯಾ ಮತ್ತು ಆತನ ಕುಟುಂಬದ ಸಾವನ್ನು ನೋಡಿ ಕುಗ್ಗಿ ಹೋಗುತ್ತಾರೆ. ಇನ್ನು ಮುಂದೆ ತಾನು ಯಾವ ಅನ್ಯಾಯವನ್ನು ಮಾಡುವುದಿಲ್ಲ. ಮಾಡಲು ಬಿಡುವುದಿಲ್ಲವೆಂಬ ತೀರ್ಮಾನಕ್ಕೆ ಬರುತ್ತಾರೆ. ಪುತಳಾ ತನ್ನ ತಪ್ಪಿಗೆ ಪ್ರಾಯಶ್ಚಿತ್ತವಾಗಿ ನಾನಾನ ದಾರಿಯನ್ನೇ ಹಿಡಿಯುತ್ತಾಳೆ.

ಆಚಾರ್ಯರ ಪತ್ನಿ ತೀರಿಕೊಂಡ ಸಂದರ್ಭದ ವಾತಾವರಣವು ಹೀಗಿದೆ. ಅಖಂಡವಾಗಿ ಸುರಿಯುತ್ತಿರುವ ಮಳೆ, ನೆನೆದುಬಿದ್ದ ಗೋಡೆಗಳು, ಉಕ್ಕಿ ಬಂದ ನದಿ, ಕತ್ತಲೆ, ಆಚಾರ್ಯರು ಸ್ನಾನ ಮಾಡಿ ತಿರುಗಿ ಬರುವಾಗ ನುಡಿಯುತ್ತಿರುವ ಗೀತೆಯ ಶ್ಲೋಕಗಳು- ಈ ವಿವರಗಳೆಲ್ಲ ಸನ್ನಿವೇಶದ ದಾರುಣತೆಯನ್ನು ಭಯಾನಕವಾಗಿ ಚಿತ್ರಿಸುತ್ತವೆ.

ಚಿಮಣಾಳ ಸಾವು ಇವರೆಲ್ಲರಿಗಿಂತ ಅತ್ಯಂತ ದಾರುಣವಾದುದು. ಲಿಂಗಪ್ಪಗೌಡ ಚಿಮಣಾಳನ್ನು ವಶಪಡಿಸಿಕೊಳ್ಳಲು ನಡೆಸಿದ ಸನ್ನಿವೇಶ ನಡುಗು ಹುಟ್ಟಿಸುವಂತಿದೆ. ಅಂದಿನ ಸಂಜೆಯನ್ನು ಲೇಖಕರು ಹೀಗೆ ಚಿತ್ರಿಸುತ್ತಾರೆ. "ಸಂಜೆಯಾಯಿತು. ಬೆಳಗಾಯಿತು. ಕತ್ತಲೆ ಮೆಲ್ಲಡಿಯನ್ನಿಡುತ್ತ, ಹೆಜ್ಜೆಯಿಟ್ಟು ಕಡೆಗೆಲ್ಲ ತನ್ನ ಕಪ್ಪು ನೆರಳನ್ನು ನೆಲೆಗೊಳಿಸುತ್ತ ಸಾಗಿಬಂತು. ಪಡುವಣ ದಿಕ್ಕಿನಿಂದ ಗಾಳಿ ತಣ್ಣಗೆ ಬೀಸಲಾರಂಭಿಸಿತು. ಊರಿನ ಗದ್ದಲ ಕಡಿಮೆಯಾಗುತ್ತಿದ್ದಂತೆಯೇ ನದಿಯ ದಿಕ್ಕಿನಿಂದ ಘೋರ್ಗರೆಯುವ ತೆರೆಗಳ ಸಪ್ಪಳ ಕೇಳತೊಡಗಿತು. ಸಾವಿರಾರು ಜೀರುಂಡೆಗಳು ಸಂಜೆಯ ಗಾನದಲ್ಲಿ ತೊಡಗಿದ್ದವು. ಮೋಡಗಳ ಬಿರುಕಿನೊಳಗಿಂದ ಏಕಾದಶಿಯ ಚಂದ್ರ ತನ್ನ ಕ್ಷೀಣ ಪ್ರಕಾಶವನ್ನು ಹರಡಿದ. ಆಕಾಶದ ಹೃದಯದಲ್ಲಿ ಏನೋ ಗೊಂದಲ ನಡೆದಿರಬೇಕು. ಇಲ್ಲದಿದ್ದರೆ ಇಂಥ ಬದಲಾವಣೆಯೇ ? ಈಗ ಗಟ್ಟಿಯಾಗಿ ತೇಲಿಬಂದ ಮೋಡವೊಂದು ಸ್ವಲ್ಪ ಹೊತ್ತಿನಲ್ಲಿಯೇ

ಹಿಂಜಿದಂತಾಗಿ ತೆಳ್ಳಗೆ ವ್ಯಾಪಿಸುತ್ತಿತ್ತು. ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ಇನ್ನೊಂದು ಮೋಡದ ಪುಂಜ ಕಾಣಿಸುತ್ತಿತ್ತು. ಈಗ ಕಂಬನಿ ಉದುರಿಸಿದಂತೆ ನಾಲ್ಕು ಹನಿ ಮಳೆ ಸುರಿದು. ಗಾಳಿಯು ಹೊಡೆತಕ್ಕೋ ಏನೋ ಬಯಲಾಗುತ್ತಿತ್ತು. ಕೈಸೋತು ದಣಿದ ಮೋಡಗಳೇ ಎಲ್ಲ ಕಡೆಗೂ ತುಂಬಿದ್ದವು. ಚಂದ್ರ ಮನಸ್ಸಿಲ್ಲದೆ ಬೆಳಗುತ್ತಿದ್ದ. ಅವನ ಸುತ್ತ ಮಂಜಿನ ತೆರೆ ಹರಡಿಕೊಂಡಿತ್ತು. ಲೋಭಾನದ ಹೊಗೆಯೊಳಗಿಂದ ದೀಪದ ಬೆಳಕನ್ನು ನೋಡಿದಂತಾಗುತ್ತಿತ್ತು. ಒಮ್ಮೆ ಚಂದ್ರನ ಸುತ್ತಲೂ ದೊಡ್ಡದಾಗಿ ಕರೆ ಕಟ್ಟಿತ್ತು. ಮಾಯಾವಿ ರಾಕ್ಷಸನೊಬ್ಬ ಅವನನ್ನು ಸೆರೆ ಹಿಡಿಯಲು ಮಂತ್ರದ ಗೆರೆ ಹಾಕಿದಂತಿತ್ತು. ಚಂದ್ರ ಅತ್ತಿತ್ತ ನೋಡುವಂತಿರಲಿಲ್ಲ. ಚಿಕ್ಕೆಗಳಂತೂ ಅರ್ಧ ಬೆಳಕಿನಲ್ಲಿ ಅರ್ಧ ಮೋಡಗಳ ಹಿಂದೆ ಮರೆಯಾಗಿದ್ದವು." ಈ ವರ್ಣನೆ ಮುಂದಿನ ದುರಂತ ಘಟನೆಗೆ ಪೀಠಿಕೆ ಯಾಕಿದಂತಿದೆ.

ಆ ದಿನ ಲಿಂಗಪ್ಪ ಚಿಮಣಾಳಿಗೆ ಕೊಟ್ಟ ಅವಧಿ ಮುಗಿಯುತ್ತಿತ್ತು. ಪಡಯ್ಯನವರೂ ಊರಲ್ಲಿರಲಿಲ್ಲ. ಮಠದಲ್ಲಿ ಸೆರೆಯಾಗಿದ್ದ ಚಿಮಣಾಳನ್ನು ಹೇಗಾದರೂ ಪಡೆಯಲೇಬೇಕೆಂದು ಹಠತೊಟ್ಟು ಲಿಂಗಪ್ಪ ಭಜನೆಯನ್ನು ಅರ್ಧಕ್ಕೆ ನಿಲ್ಲಿಸಿ ಮಠದೊಳಗೆ ಹೋಗುತ್ತಾನೆ. ಚಿಮಣಾಳ ಕೊಠಡಿಯ ಬಾಗಿಲ ಚಿಲಕವನ್ನು ಸಪ್ಪಳ ಮಾಡಿ ತಾನು ಬಂದಿರುವುದನ್ನು ಸೂಚಿಸುತ್ತಾನೆ. ತನ್ನ ಮಗುವಿಗೆ ಹಾಲುಣಿಸುತ್ತಿದ್ದ ಚಿಮಣಾಳನ್ನು ನೋಡಿದ ಲಿಂಗಪ್ಪ ತಾಳ್ಮೆ ಕಳೆದುಕೊಂಡು ಹುಚ್ಚನಂತಾಗುತ್ತಾನೆ. "ಬಾಗಿಲು ಧಡಧಡನೆ ಬಡಿದ 'ಚಿಮಣಾ' ಎಂದು ಕೂಗಿದ "ಯಾರವರು?" ಚಿಮಣಾ ಗಾಬರಿಯಿಂದಲೇ ಕೇಳಿದಳು. "ನಾ ಚಿಮಣಾ, ನಾನು, ಬಾಗಿಲಾ ತೆರಿ" ಲಿಂಗಪ್ಪ ಅಂಗಲಾಚಿದ. ಅವನ ದನಿಯನ್ನು ಕೇಳಿ ಚಿಮಣಾ ಕಲ್ಲಾದಳು, ಮುಖದಲ್ಲಿ ನಿಷ್ಠುರತೆ ಮೂಡಿತು. ಕೂಸನ್ನು ಮತ್ತೆ ಜೋಳಿಗೆಯಲ್ಲಿ ಮಲಗಿಸಿದಳು. ದೃಢ ನಿರ್ಧಾರದಿಂದ ಹಾಸಿಗೆಯ ಮೇಲೆ ಕುಳಿತಳು. ಲಿಂಗಪ್ಪ ಮತ್ತೆ ಬಾಗಿಲು ನೂಕಿದ ಚಿಮಣಾಳಿಂದ ಉತ್ತರವೇ ಬರಲಿಲ್ಲ" ಇಂದು ಚಿಮಣಾಳ ಸತ್ವಪರೀಕ್ಷೆಯ ದಿನ. ಆಕೆ ಲಿಂಗಪ್ಪನಿಗೆ ಏಳು ದಿನಗಳ ಗಡುವುಕೊಟ್ಟಿದ್ದು ಇಂದಿನ ಸಾವನ್ನು ನಾಳಿಗೆ ದೂಡಿದಂತಾಗಿತ್ತು ಅಷ್ಟೆ. ಸಾವನ್ನು ಮುಂದೂಡುವುದರಿಂದೇನು ಪ್ರಯೋಜನವಿಲ್ಲವೆಂದರಿತ ಚಿಮಣಾಳಿಗೆ ಅದಿಲ್ಲದರಿಂದ ಬಿಡುಗಡೆ ಪಡೆಯಬೇಕೆನಿಸುತ್ತದೆ. ಆದರೆ ಅಧಿಕಾರ, ಹಣಬಲ, ಜನಬಲವಿರುವ ಲಿಂಗಪ್ಪನನ್ನು ಪ್ರತಿಭಟಿಸಿದರೆ ಯಾರೂ ಕೇಳುವುದಿಲ್ಲವೆಂದು ಕಣ್ಣೀರಡುತ್ತಾಳೆ.

"ಮತ್ತೊಮ್ಮೆ ಬಾಗಿಲು ಧಡಧಡ ಸಪ್ಪಳ ಮಾಡಿತು. ಪ್ರತಿಭಟಿಸುವುದು ಸಾಧ್ಯವೇ ಇಲ್ಲ. ಆದರೆ ಲಿಂಗಪ್ಪನಿಗೆ ಒಪ್ಪುವುದೂ ಸಾಧ್ಯವಿಲ್ಲ. ಏನು ಮಾಡಿದರೂ ಅವನೇನು ಬಾಗಿಲು ಬಡಿಯುವುದನ್ನು ಬಿಡಲಾರ. ಹೊರಗೆ ಭಜನೆ ನಡೆದಿದೆ. ಎಷ್ಟೋ ಜನರು

ಇದಕ್ಕಿಂತ ಭೀಕರವಾದ ಪರಿಸ್ಥಿತಿಯನ್ನು ಬೇರೆಲ್ಲಿಯೂ ಕಾಣಲು ಸಾಧ್ಯವಿಲ್ಲ. ಒಟ್ಟಾರೆ ಈ ಘಟನೆ ಸನ್ನಿವೇಶ ರಚನೆಯ ಶ್ರೇಷ್ಠ ಮಾದರಿಯಾಗಿದೆ.

ಪಾದಕ್ಕೆಯ ವಿಷಮಸ್ಥಿತಿಯನ್ನು ಸರಿಪಡಿಸಲಾಗದೆ ಬಾಳಾಚಾರ್ಯರು ಕೃಷ್ಣಾನದಿಯ ಸೆಳವಿಗೆ ಸಿಕ್ಕಿ ಇಚ್ಛಾಮರಣಿಗಳಾಗುತ್ತಾರೆ. ಜಮೀನು ದೊರೆಯದ ಕಾರಣ ಹುಚ್ಚನಾದ ಲಿಂಗಪ್ಪ ಪ್ಲೇಗಿನಿಂದ ಮತ್ತಷ್ಟು ವಿಕಾರನಾಗಿ ಕೊನೆಗೆ ಬೆಂಕಿಗೆ ಆಹುತಿಯಾಗುತ್ತಾನೆ.

ಹೀಗೆ 'ಪಾಪ' ಎಂಬುದು ಗ್ರಾಮಾಯಣ ಕಾದಂಬರಿಯ ಬಹುಪಾಲು ಎಲ್ಲಾ ಪಾತ್ರಗಳನ್ನು ಆವರಿಸಿಕೊಂಡಿರುವ ಬಹುಮುಖ್ಯ ಘಟನೆಯಾಗಿದೆ.

## ಪಾದಳ್ಳಿಗೆ ಅಧಿಕಾರಿಗಳು ಬಂದ ಪ್ರಸಂಗ

ಗ್ರಾಮಾಯಣ ಕಾದಂಬರಿಯ ಕಥಾವಸ್ತು ಸ್ವಾತಂತ್ರ್ಯ ಪೂರ್ವದ್ದು. ಭಾರತ ಇನ್ನೂ ಬ್ರಿಟಿಷರ ದಾಸ್ಯದಲ್ಲೇ ಇದ್ದಂತಹ ಕಾಲ. ಆ ದಿನಗಳಲ್ಲಿ ಸರ್ಕಾರಿ ಅಧಿಕಾರಿಗಳು. ಪೋಲೀಸರು ಗ್ರಾಮಗಳಿಗೆ ಆಗಮಿಸುತ್ತಾರೆಂದರೆ ಜನತೆಯಲ್ಲಿ ಭಯ. ಆತಂಕ ಮನೆ ಮಾಡುತ್ತಿತ್ತು. ಬಂದವರೆಲ್ಲರು ತಮ್ಮ ಅಧಿಕಾರ ಬಲದಿಂದ ಜನಸಾಮಾನ್ಯರನ್ನು ಶೋಷಣೆ ಮಾಡುತ್ತಿದ್ದರು. ಲೇಖಕರೇ ಹೇಳುವಂತೆ ಅವರು ಯಮಸದೃಶರಾಗಿದ್ದರು. ದರ್ಪವಿಲ್ಲದವನು ಅಧಿಕಾರಿಯೇ ಅಲ್ಲ ಎಂಬ ಭಾವನೆ ದೃಢವಾಗಿ ಸಾಮಾನ್ಯರಲ್ಲಿ ಬೇರುಬಿಟ್ಟದ್ದ ಕಾಲ ಅದು. ಇಂಥ ಅಧಿಕಾರಿಗಳು ಪಾದಳ್ಳಿಗೆ ಆಗಮಿಸುತ್ತಾರೆ. ಅವರಲ್ಲಿ ಅಸಿಸ್ಟೆಂಟು ಕಲೆಕ್ಟರ್ ಆದ ಗಿಬ್ಸನ್ ಸಾಹೇಬ, ಫೌಜುದಾರರಾದ ಫಕರುದ್ದೀನ ಸಾಹೇಬ, ಶಿರಸ್ತೇದಾರರಾದ ಜಕ್ಕಪ್ಪ. ಫೌಜದಾರರ ಆಡ್ಲಿ ಕೇಶವರಾಯ. ಮಾಮಲೇದಾರರ ಕಾರಕೂನನಾದ ಗೋಪಾಳರಾಯ. ಮಾಮಲೇದಾರರ ಪಟ್ಟೇವಾಲಾ ಉಸ್ಮಾನ. ಫಕರುದ್ದೀನರ ಪೋಲೀಸ್ ಸಿಪಾಯಿ ಇಸ್ಮಾಯಿಲ್. ಪೋಲೀಸ್ ಹವಾಲ್ದಾರ–ಮೊದಲಾದವರು.

ಮೇಲಿನ ಅಧಿಕಾರಿಗಳಲ್ಲಿ ಕೆಲವರು ಬಂದ ಸಂದರ್ಭವನ್ನು ಮಾತ್ರ ಇಲ್ಲಿ ವಿವೇಚಿಸಲಾಗಿದೆ. ಪಡದಪ್ಪ ದಾದಾನ ಮೇಲೆ ಹಾಕಿದ ಮೂಕಿ ಅರ್ಜಿಯ ವಿಚಾರಣೆಗಾಗಿ ಫೌಜುದಾರ ಫಕರುದ್ದೀನ ಆಗಮಿಸಿದ ಸಂದರ್ಭ– "ಯಮದೂತರಂತೆ ಭೀಕರವಾದ ಪೋಲೀಸ್ ಕಾನ್‌ಸ್ಟೇಬಲ್ಲರೊಂದಿಗೆ ಫಕರುದ್ದೀನರ ಪರಿವಾರ ಬಂದಿತೆಂದರೆ. ಗಜನಿ ಮಹಮೂದನ ದಾಳಿ ಬಿದ್ದಂತೆ ಜನ ಅಂಜಿ ನಡುಗುತ್ತಿದ್ದರು. ಆ ಪರಿವಾರ ಊರು ಬಿಡುವವರೆಗೆ ಊರಲ್ಲಿ ಯಾರಿಗೂ ನಿದ್ದೆ ಹತ್ತುತ್ತಿರಲಿಲ್ಲ. ಫಕರುದ್ದೀನರು ಹಗಲು ಹೊತ್ತು ಸಾಮಾನ್ಯ ಪೋಲೀಸ್ ಅಧಿಕಾರಿಯಂತೆಯೇ ಕಂಡು ಬರುತ್ತಿದ್ದರು. ಸರಬರಾಯಿ ವ್ಯವಸ್ಥೆ ಅಚ್ಚುಕಟ್ಟಾಗಿದೆಯೋ. ಇಲ್ಲವೋ ಎಂಬುದರ ಮೇಲೆ ಅವರ ಕಾಕದೃಷ್ಟಿ ಇದ್ದದ್ದೇ.

ಓಲೆಕಾರ ತಂದ ಪೆಣ್ಣೆಯ ಪಾತ್ರೆ. ಅವರ ಕಣ್ಣು ಮೂಗಿನ ಪರೀಕ್ಷೆಯಾದ ನಂತರವೇ ಅಡಿಗೆ ಮನೆಯನ್ನು ಸೇರತಕ್ಕದ್ದೆಂದು ಸಕ್ತ ಆಜ್ಞೆಯಾಗಿತ್ತು. ಕೋಳಿಗಳಿಗೆ ಜೋಳ ಬೀರುವ ಮೊದಲು ಅವರು ಅವುಗಳನ್ನು ಎತ್ತಿನೋಡಿ. ಕೊಕ್‌ಕೊಕ್ ಕೊಕ್ ಎಂದು ಅವು ಚಡಪಡಿಸುವುದನ್ನು ನೋಡಿ ದೊಡ್ಡದಾಗಿ ನಕ್ಕು ನೆಲಕ್ಕೆ ಅಪ್ಪಳಿಸುತ್ತಿದ್ದರು. ರೋಗಿಷ್ಟ ಕೋಳಿ ಎಂದು ಕಂಡುಬಂದರೆ ಅವರ ಕಿಡಿಗಣ್ಣುಗಳಿಂದಲೇ ತಿಂದವನ ಅವತಾರ ಸಮಾಪ್ತಿಯಾಗುತ್ತಿತ್ತೆಂಬ ಹೆದರಿಕೆ ಎಲ್ಲ ಗೌಡರಿಗೂ ಓಲೆಕಾರರಿಗೂ ಗೊತ್ತಿತ್ತು." ಮಟ್ಟಿಗಿನ ದರ್ಪ ಈತನದು. ಸಾಮಾನ್ಯರನ್ನು ಹೇಗೆ ಶೋಷಿಸುತ್ತಿದ್ದರೆಂಬುದಕ್ಕೆ ಸಂಗಪ್ಪನೇ ಸಾಕ್ಷಿಯಾಗಿದ್ದಾನೆ. ಫೌಜದಾರರ ಬಡಎಮ್ಮೆಯನ್ನು ಕಷ್ಟಪಟ್ಟು ಆರೈಕೆ ಮಾಡಿ ಅದು ಈಯಲು ಬಂದಾಗ ಸಾಹೇಬರಿಗೆ ತಿಳಿದರೆ ಅದು ಅವರ ಮನೆಗೇ ಹೋಗಬಹುದೆಂದು ಹೆದರಿ ಎಮ್ಮೆ ಸತ್ತುಹೋಯಿತೆಂದು ವರದಿ ಮಾಡಿದ್ದ. ಈ ಸುಳ್ಳು ಹೇಳಿದ ಒಂದು ಸಣ್ಣ ತಪ್ಪಿಗೆ ಬಡಸಂಗಪ್ಪ ನೂರು ದಂಡ ಕಟ್ಟಬೇಕಾಗುತ್ತದೆ. ಅಧಿಕಾರಿಗಳೆದುರು ಸಾಮಾನ್ಯರ ಸ್ಥಿತಿಯನ್ನು– " ದೊಡ್ಡವರ ಜೋಡಿ ವ್ಯವಹಾರ. ದೆವ್ವನ ಹೊಟ್ಯಾಗ ನಾವು ಹೋದರೂ ತ್ರಾಸ. ನಮ್ಮ ಹೊಟ್ಯಾಗ ದೆವ್ವ ಹೊಕ್ಕರೂ ತ್ರಾಸ" ಎಂಬ ಅಜ್ಜಿ ಕೇಶವರಾಯರ ಮಾತು ತಿಳಿಸುತ್ತದೆ.

ಅಮಲ್ದಾರರ ಬಗೆಗಿನ ಭಯ ಎಷ್ಟರ ಮಟ್ಟಿಗಿತ್ತೆಂದರೆ ಇವರು ಬಂದ ಸಂದರ್ಭದಲ್ಲಿ ಚಾವಡಿಯ ಮುಂದೆ ಹಾಯಲೂ ಕೂಡ ಜನರು ಅಂಜುತ್ತಿದ್ದರು. ಜಿರುಗಾಳಿ ಬೀಸುವ ಮೊದಲು ವಾತಾವರಣ ಸ್ತಬ್ಧವಾಗಿರುವಂತೆ ಫಕರುದ್ದೀನ ಸಾಹೇಬರು ಶಾಂತರಾಗಿ ಕಂಡರೂ ಕೂಡ ಅವರ ಕಿಡಿಗಣ್ಣುಗಳಲ್ಲಿಯೇ ಮುಂಬರುವ ಅನಾಹುತಗಳನ್ನು ಗುರುತಿಸಬಹುದಾಗಿತ್ತು. ರಾತ್ರಿಯಲ್ಲಿ ಚಾವಡಿಗೆ ಯಾರ್ಯಾರಿಗೆ ಬಕಾಸುರ ಆಮಂತ್ರಣ ಬರುವದೋ ಎಂದು ಜನರು ಭಯಗ್ರಸ್ತರಾಗುತ್ತಿದ್ದರು. ಜನತೆಗೆ ಅಧಿಕಾರಿಗಳು ಬಂದು ಹೋಗುವವರೆಗೂ ಒಂದೊಂದು ಕ್ಷಣವೂ ಒಂದೊಂದು ಯುಗದಂತೆ ಭಾಸವಾಗುತ್ತಿತ್ತು. ದಾದಾನ ವಿಚಾರಣೆಗೆ ಬಂದ ಫೌಜದಾರರು ಪಡದಪ್ಪನ ಚಾಡಿ ಮಾತುಗಳನ್ನು ಕೇಳಿ ದಾದಾನನ್ನು ಶಿಕ್ಷಿಸಲೇಬೇಕೆಂದು ತೀರ್ಮಾನಿಸುತ್ತಾರೆ. ಆತನ ವಿರುದ್ಧ ಸಾಕ್ಷಿಯನ್ನು ಸೃಷ್ಟಿಸುವಂತೆ ಬಾಪುಸಾಹೇಬರಿಗೆ ತಾವೇ ಸಲಹೆ ನೀಡುತ್ತಾರೆ. ಇದನ್ನು ಗಮನಿಸಿದಾಗ ಜನಸಾಮಾನ್ಯರಿಗೆ ನ್ಯಾಯ ಒದಗಿಸಬೇಕು. ಅಪರಾಧಿಗೆ ಶಿಕ್ಷೆ ವಿಧಿಸಬೇಕೆಂಬ ಜನಪರ ಕಾಳಜಿ ಇಲ್ಲದಿರುವುದು ಕಂಡುಬರುತ್ತದೆ. ದಾದಾನ ವಿರುದ್ಧ ಯಮುನಾ ಸಾಕ್ಷಿ ಹೇಳುತ್ತಾಳೆಂದು ಕೇಳಿದ ಪ್ರತಿಭಾ ಎಲ್ಲಿ ನಿಜಬಯಲಾಗುತ್ತದೋ ಎಂದು ಹೆದರಿ ಆತ್ಮಹತ್ಯೆಗೆ ಶರಣಾಗುತ್ತಾಳೆ. ವಾಡೆಯ ಭವಿತವ್ಯದ ಪ್ರಶ್ನೆ ಉದ್ಭವವಾಗುತ್ತದೆ.

ಅದೇ ರೀತಿ ಮಾಮಲೇದಾರರಾದ ಕೃಷ್ಣರಾಯರು ವಾದಳ್ಳಿಗೆ ಆಗಮಿಸಿದಾಗಲೂ

ಹೊಸ ಹೊಸ ಸಮಸ್ಯೆಗಳು ಉದ್ಭವವಾಗುತ್ತವೆ. ಇವರೂ ಕೂಡ 'ಬಡಗಿ ಮಾಮಲೇದಾರ'ರೆಂದೇ ಪ್ರಸಿದ್ಧರಾಗಿದ್ದರು. ಅವರೆದುರು ನಿಂತು ವಾದಿಸುವ 'ಎಂಟೆದೆ' ಯಾರಿಗೂ ಇರಲಿಲ್ಲ. ಅಜಾನುಬಾಹು ದೇಹ. ಹರವಾದ ಹಣೆ. ಕೋರೆಮೀಸೆಗಳನ್ನು ನೋಡಿ ಮಾತಾಡುವ ಧೈರ್ಯ ಯಾರಿಗೂ ಇರಲಿಲ್ಲ. ಅವರ ರೂಪವೇ ಭಯಂಕರವಾಗಿರುತ್ತಿತ್ತು. ಇವರು ಬಂದಾಗಲೂ ದಾದಾನ ಪ್ರಕರಣ ವಿಚಾರಣೆಗೆ ಒಳಪಡುತ್ತದೆ. ಜಾಮೀನು ನೀಡಿದ್ದ ಪಾರ್ವತಪ್ಪ ದಾದಾನ ಮೇಲೆ ಕೋಪಗೊಂಡು ಅತನಿಗೆ ಶಿಕ್ಷೆ ವಿಧಿಸಲು ನಿರ್ಧರಿಸಿ ಶೇಷಪ್ಪನೊಂದಿಗೆ ಸೇರಿ ಸಂಚು ರೂಪಿಸುತ್ತಾನೆ. ಆದರೆ ಬಾಳಾಚಾರ್ಯರ ಪ್ರಯತ್ನದಿಂದ ದಾದಾ ಬಿಡುಗಡೆಯಾಗುತ್ತಾನೆ. ಇದೇ ಸಂದರ್ಭದಲ್ಲಿ ವಾರಸಾ ರಿಜಿಸ್ಟರ್ ವಿಚಾರಣೆ ನಡೆದು ಶೇಷಪ್ಪನ ಮೋಸವೆಲ್ಲ ಬಯಲಿಗೆ ಬೀಳುತ್ತದೆ. ಶೇಷಪ್ಪ ಹಲ್ಲು ಕಿತ್ತ ಹಾವಿನಂತಾಗುತ್ತಾನೆ. ಅವನ ಕುತಂತ್ರ ಕಾರ್ಯಗಳಿಗೆ ಒಂದು ರೀತಿಯ ಕಡಿವಾಣ ಬಿದ್ದಂತಾಗುತ್ತದೆ. ಮುಂದೆ ಮಹಾರಾಜರೊಟ್ಟಿಗೆ ಬಂದ ಗಿಬ್ಸನ್ ಸಾಹೇಬರು ಕೊಡುವ ವಿಕ್ಷಿಪ್ತ ನಿರ್ಣಯಗಳ ಸಂದರ್ಭ ಕಾದಂಬರಿಯ ಅತಿಮುಖ್ಯವಾದ ಘಟನೆಯಾಗಿದೆ. ಕೃತಿಯ ಮೂರನೆಯ ಭಾಗದ ಪೈಶಾಚಿಕ ದೃಶ್ಯಗಳಿಗೆ ಅವಕಾಶ ಕಲ್ಪಿಸಿಕೊಡುವ ಈ ಘಟನೆ ಹಾವಳ್ಳಿಯ ದುರಂತವನ್ನು ನಿರ್ಣಾಯಕವಾಗಿ ಧ್ವನಿಸಿಬಿಡುತ್ತದೆ. ತಗಾವಿ ಸಾಲವನ್ನು ಊರ ಜನರಿಗೆ ಸರಿಯಾಗಿ ಮುಟ್ಟಿಸಿಲ್ಲ. ಮತ್ತು ಬರಗಾಲ ಪರಿಹಾರಕ್ಕೆಂದು ಅರ್ಜಿ ಬರೆಸಿ ಊರ ಜನರಿಂದ ಅದರ ಮೇಲೆ ಸಹಿ ತೆಗೆದುಕೊಂಡು ಆ ಅರ್ಜಿಯೊಳಗೆ ಶ್ಯಾಮರಾಯನ ನೇಮಕವಾಗಬಾರದೆಂದು ಅರ್ಜಿ ಬರೆಸಿದ ಆರೋಪದ ಮೇಲೆ ಶೇಷಪ್ಪ ತನ್ನ ಕುಲಕರ್ಣಿ ವೃತ್ತಿಯನ್ನು ಕಳೆದುಕೊಳ್ಳುತ್ತಾನೆ.

ಊರು ಬಿಟ್ಟು ಹೋಗಿದ್ದ ಹಡದಪ್ಪ ಮತ್ತು ಲಿಂಗಪ್ಪ ಮತ್ತೆ ಹಾವಳ್ಳಿಗೆ ಆಗಮಿಸಿದ್ದಲ್ಲದೆ ಅವರು ಭದ್ರವಾಗಿ ತಳವೂರಲು ಗಿಬ್ಸನ್ನರು ಕೊಟ್ಟ ನಿರ್ಣಯಗಳು ಸಹಕಾರಿಯಾಗುತ್ತವೆ. ಹಡದಪ್ಪನವರು ಮೂಲಪಟ್ಟದ ಅಧಿಕಾರಿಗಳು. ಅಂದ ಮೇಲೆ ಅವರಿಗೆ ಮಠದಲ್ಲಿರಲು ಸಂಪೂರ್ಣ ಸ್ವಾತಂತ್ರ್ಯವಿರಬೇಕು. ಅವರನ್ನು ಯಾರೂ ಆತಂಕಪಡಿಸಲಾಗದೆಂದು ಆಜ್ಞೆ ಹೊರಡಿಸುತ್ತಾರೆ. ಆದರ ಜೊತೆಗೆ ಲಿಂಗಪ್ಪನ ವಾರಸು ಅಪೀಲಿನ ಕೌಚಾಶಿ ನಡೆಸಿ, ಶಂಕರಪ್ಪಗೌಡರ ವಾರಸಾಹಕ್ಕು ಅವರ ಮೊದಲ ಹೆಂಡತಿಯ ಹೊಟ್ಟೆಯಲ್ಲಿ ಹುಟ್ಟಿದ ಹಿರಿಯ ಮಗನಾದ ಲಿಂಗಪ್ಪನಿಗೆ ಸಲ್ಲಬೇಕೆಂದು ಹಿಂದೆ ಮೊಮಲೇದಾರರು ಕೊಟ್ಟ ನಿರ್ಣಯವನ್ನೇ ಎತ್ತಿ ಹಿಡಿಯುತ್ತಾರೆ. ಗಿಬ್ಸನ್ ಸಾಹೇಬರು ಕೂಲಂಕುಷವಾಗಿ ಚರ್ಚಿಸದೆ ಪೂರ್ವಾಗ್ರಹ ಪೀಡಿತರಾಗಿ ಕೊಟ್ಟ ತೀರ್ಪು ಇದಾಗಿದೆ ಎಂಬುದನ್ನು ಅವರ ಮಾತುಗಳೇ ಸ್ಪಷ್ಟಪಡಿಸುತ್ತದೆ. ಹಿಂದೆ ಪಾರ್ವತಪ್ಪ ಶ್ಯಾಮರಾಯರ ವಿರುದ್ಧ ಕೊಟ್ಟ ಅರ್ಜಿಗೆ ಸಹಿ ಹಾಕಿದ್ದ ತಪ್ಪನ್ನು ಸಾಹೇಬರು ಇನ್ನು ಮರೆತಿರಲಿಲ್ಲ. ಲಿಂಗಪ್ಪನ ಪ್ರಕರಣದ ಹಿಂದೆಯೂ

ಇಂಥ ಮೋಸ ನಡೆದಿರಲಾರದೆಂದು ಹೇಗೆ ಹೇಳಬೇಕು? ಈ ಪಾರ್ವತಪ್ಪನಂತೆಯೇ ನಿರ್ಣಯ ಹೇಳಿದರೆ ಪುಂಡಾಟಿಕೆಗೆ ಇನ್ನೂ ಅವಕಾಶ ದೊರೆಯುವಂತಾಗುವುದಿಲ್ಲವೇ? ಎಂದು ತಮ್ಮೊಳಗೇ ಊಹಿಸಿಕೊಂಡು ತೀರ್ಪನ್ನು ಕೊಡುತ್ತಾರೆ. ಅಥವಾ ಅರ್ಜಿಯ ಜೊತೆಯಲ್ಲಿ ಹಾಜರುಪಡಿಸಿದ್ದ ಲಿಂಗಪ್ಪನ ಜನನ ಉತಾರವನ್ನು ಗಮನಿಸುವುದೇ ಇಲ್ಲ. ಅದರಲ್ಲಿ ಲಿಂಗಪ್ಪನ ತಂದೆಯ ಹೆಸರು ಶಂಕರಪ್ಪನೆಂದೂ ಆತನ ಜಾತಿ ಕುರುಬನೆಂದು ಬರೆದಿದ್ದರೂ ಅದನ್ನು ಲಕ್ಷ್ಯಕ್ಕೇ ತೆಗೆದುಕೊಳ್ಳದೆ ತಮ್ಮ ಮೂಗಿನ ನೇರಕ್ಕೆ ತೀರ್ಪುಕೊಡುತ್ತಾರೆ.

ಈ ಎರಡು ನಿರ್ಣಯಗಳು ಜನರ ಪವಿತ್ರ ಭಾವನೆಯನ್ನೇ ಹೊಲಗೆಡಿಸುತ್ತವೆ. ಮಾತ್ರವಲ್ಲದೆ ಪಾದಕ್ಕಿಯ ಜೀವನವನ್ನೇ ಬೇರೆ ದಿಕ್ಕಿಗೆ ತಿರುಗಿಸುತ್ತವೆ. ಪೀಡೆ ತೊಲಗಿತೆಂದು ನಿರಾಳವಾಗಿದ್ದ ಜನತೆ ಪಡದಪ್ಪ ಮತ್ತು ಲಿಂಗಪ್ಪನ ಪುನರಾಗಮನದಿಂದ ಇಬ್ಬರೂ ಮತ್ತಾವ ಕೃತ್ಯವನ್ನೆಸಗುತ್ತಾರೋ ಎಂದು ಭಯಗ್ರಸ್ತರಾಗುತ್ತಾರೆ. ಮತ್ತೆ ಮಠಾಧಿಪತಿಸ್ಥಾನವನ್ನಲಂಕರಿಸಿದ ಪಡದಪ್ಪ ಲಿಂಗಪ್ಪನ ಜೊತೆಗೂಡಿ ಲೂಟಿ. ಕಳ್ಳತನ ಮೊದಲಾದ ನೀಚ ಕೃತ್ಯಗಳಿಗೆ ಜನರನ್ನು ಪ್ರೇರೇಪಿಸಿದ್ದಲ್ಲದೆ ಗೌಡರ ಹೊಲ. ಮನೆಗಳ ನಾಶಕ್ಕೆ ಕಾರಣನಾಗುತ್ತಾನೆ. ಹೀಗೆ ಸರ್ಕಾರಿ ಅಧಿಕಾರಿಗಳ ಆಗಮನ ಇಡೀ ಪಾದಕ್ಕಿಯ ಜೀವನವನ್ನೇ ಹೇಗೆ ಅಸ್ತವ್ಯಸ್ತಗೊಳಿಸುತ್ತದೆ ಎಂಬುದನ್ನು ತಿಳಿಸುವ ಮೂಲಕ ಸಮಕಾಲೀನ ಸಮಾಜದ ನ್ಯಾಯ ತೀರ್ಮಾನಗಳು ಅಂದಿನ ಜನಸಾಮಾನ್ಯರ ಮೇಲೆ ಮತ್ತು ಆ ಸಮಾಜದ ಮೇಲೆ ಉಂಟು ಮಾಡಿದ ಪರಿಣಾಮಗಳನ್ನು ಕಟ್ಟಿ ಕೊಡುತ್ತಾರೆ.

ಕಥಾ ಸಂವಿಧಾನಕ್ಕೆ ಅನುಗುಣವಾಗಿ ಸೃಷ್ಟಿಸಿರುವ ವಾತಾವರಣವೂ ಕಾದಂಬರಿಯ ಮಹತ್ವದ ಅಂಗವಾಗಿದೆ. ವರ್ಣನಾತ್ಮಕ ಭಾಗಗಳು ವಿರಳವಾಗಿದ್ದರು ಸೃಷ್ಟಿಸಿರುವ ವಾತಾವರಣ ಸೂಕ್ಷ್ಮವಾಗಿದೆ. ಶಂಕರಪ್ಪಗೌಡರು ಹೊಲಗೇರಿಯಲ್ಲಿ ಬಾಳ್ಯಾನ ಹೆಣವನ್ನು ನೋಡಿದಾಗಿನ ಮಧ್ಯಾಹ್ನದ ವರ್ಣನೆ ಹೀಗಿದೆ– “ಬಿಸಿಲಿನಲ್ಲಿ ಚೆನ್ನಾಗಿ ಕಾಯ್ದ ಹಲಗೆಯ ಸಪ್ಪಳ. ಅವನ್ನು ಮೀರಿಸುವ ಡಂಗುರದವನು ಕಂಚಿನ ದನಿಯನ್ನು ಕೇಳಿ ಸಿಡುಗಿನ ಗುಡುಗನ್ನೇ ಕೇಳಿದಂತೆ ಜನರೆಲ್ಲ ಭಯಗ್ರಸ್ತರಾದರು. ನಾನಾನ ಮರಣವಾದಂದಿನಿಂದ ಪಾದಕ್ಕಿಗೆ ವಿಪತ್ತುಗಳು ಸಾಲಾಗಿ ಒಂದರ ಮೇಲೊಂದರಂತೆ ದಾಳಿಯಿಟ್ಟಿದ್ದವು. ಆ ಸಂಕಟಗಳ ಘೋರ ಅವತಾರವೆಂಬಂತೆ ಫೌಜದಾರ ಊರಲ್ಲಿ ಬೀಡುಬಿಟ್ಟಿದ್ದ. ಎಲ್ಲಿಕ್ಕೂ ಕಳಸವಿಡುವಂತೆ ಕಾಲರಾ ಪಿಡುಗು ದೂರದಿಂದಲೇ ಸನ್ನೆ ಮಾಡುತ್ತ ಊರನ್ನೇ ನುಂಗುತ್ತೇನೆಂದು ಹೆದರಿಸುತ್ತಿತ್ತು”–ಇದು ವಾತಾವರಣದ ಭೀಕರತೆಯನ್ನು ಸಮರ್ಥವಾಗಿ ಚಿತ್ರಿಸುತ್ತದೆ. ಗೌಡರ ಹೊಲದ ಬೆಳೆಯನ್ನು ಲೂಟಿ ಮಾಡಲು ಬಂದಾಗಿನ ಬೆಳದಿಂಗಳ ವರ್ಣನೆ. ಹೋಳಿ ಹುಣ್ಣಿಮೆಯ ವಿನೋದಪೂರ್ಣ ಚಿತ್ರ. ಚೆನ್ನಪ್ಪನ ಚಕ್ಕಡಿ ಪಾದಕ್ಕಿಗೆ ಹಿಂದಿರುಗಿದಾಗ ಮುಂಗಾರಿನ ಮಳೆಯ ವರ್ಣನೆ ಇವೆಲ್ಲ ಸತ್ವಪೂರ್ಣವಾಗಿರುವುದಲ್ಲದೆ ಅರ್ಥಪೂರ್ಣವೂ ಆಗಿವೆ.

# ಅಧ್ಯಾಯ-೪

## ಪಾತ್ರ ಚಿತ್ರಣ

ಅರವತ್ತು ವರ್ಷಗಳ ಹಿಂದಿನ ಒಂದು ಗ್ರಾಮದ ಸಮಗ್ರ ಜೀವನವನ್ನು ಕಟ್ಟಿಕೊಡುವ ಶುದ್ಧ ಸಾಮಾಜಿಕ ಕಾದಂಬರಿ ಗ್ರಾಮಾಯಣ. ಸಾರ್ವಜನಿಕ ಜೀವನವೇ ನಮ್ಮ ಕಣ್ಣಮುಂದೆ ಹಾದುಹೋಗುತ್ತದೆ. ಈ ಕಾದಂಬರಿಯಲ್ಲಿ ೮೦ ಕ್ಕೂ ಹೆಚ್ಚು ಪಾತ್ರಗಳು ಬಂದು ಹೋಗುತ್ತವೆ. ಆದರೆ ಒಬ್ಬ ವ್ಯಕ್ತಿಯ ಕೌಟುಂಬಿಕ ವಿವರಗಳೂ ದೊರೆಯುವುದಿಲ್ಲ. ಕಾದಂಬರಿ ಹೆಸರೇ ಸೂಚಿಸುವಂತೆ ಗ್ರಾಮಾಯಣ ಒಂದು ಮಹಾಕಾದಂಬರಿ. ಎಲ್ಲ ಮಹಾಕಾದಂಬರಿಗಳಲ್ಲಿರುವಂತೆ ಇಲ್ಲಿಯೂ ಜನರ ಜೀವನದ ಸಮಗ್ರ ಚಿತ್ರಣವೇ ಕಾದಂಬರಿಯ ವಸ್ತುವಾಗಿದೆ. ಕಾದಂಬರಿಯ ಕ್ರಿಯೆಯ ಬಹುಭಾಗ ಕೃಷ್ಣಾನದಿಯ ದಂಡೆಯ ಪಾದಕ್ಷಿ ಎಂಬ ಒಂದು ಗ್ರಾಮದಲ್ಲಿ ನಡೆಯುತ್ತದೆ. ಈ ಕಾದಂಬರಿಯಲ್ಲಿ ಒಬ್ಬ ಕೇಂದ್ರ ವ್ಯಕ್ತಿಯಿಲ್ಲ. ಲೇಖಕರು ಪ್ರಾರಂಭದಲ್ಲಿ ಹೇಳುವಂತೆ ಇಲ್ಲಿ ನಾಯಕ-ನಾಯಕಿಯ ಪಾತ್ರಗಳಿಲ್ಲ. ಪ್ರಮುಖ ಪಾತ್ರಗಳು ಇರಬಹುದಾದರೂ ಅವು ಜೀವನ ವಿನ್ಯಾಸದ ದೃಷ್ಟಿಯಿಂದ ಮಾತ್ರ ಪ್ರಮುಖವಾಗಿವೆ. ಪಾದಕ್ಷಿಯ ಜನ ಸಮೂಹವೇ. ಅಲ್ಲಿನ ಬದುಕೇ ಈ ಕಾದಂಬರಿಯ ನಾಯಕನೆಂದು ತಿಳಿದಿದ್ದೇನೆಂದು ಹೇಳುತ್ತಾರೆ. ಆದ್ದರಿಂದ ಪಾತ್ರಗಳು ಸಾಕಷ್ಟು ವೈವಿಧ್ಯವನ್ನು ಪಡೆದಿದ್ದರೂ ಅವುಗಳಾವು ಪ್ರತ್ಯೇಕವಾಗಿ ನಿಲ್ಲದೆ ಪಾದಕ್ಷಿಯ ನೆಲದೊಂದಿಗೆ ಬೇರುಬಿಟ್ಟ ಪಾತ್ರಗಳಾಗಿವೆ.

ರಾವಬಹದ್ದೂರರ 'ಗ್ರಾಮಾಯಣ' ಒಂದು ಸಂಮೃದ್ಧವಾದ ಜಗತ್ತು. ಇಲ್ಲಿ ಸ್ವಂತ ಪಾದಕ್ಷಿಯವರು ಮತ್ತು ಹೊರಗಿನಿಂದ ಪಾದಕ್ಷಿಗೆ ಬಂದವರು ಇದ್ದಾರೆ. ಹಾಗಾಗಿ ಇಲ್ಲಿ ವಾಡೆಗೆ ಸಂಬಂಧಿಸಿದ ಆಳುಗಳು. ಹೊರಗಿನ ರೈತರು. ಗೌಡರು. ಬ್ರಾಹ್ಮಣರು. ಹುಲಿಬೇಟೆ ಮಾಡುವ ಹಳಬರು. ಕುರುಬರು. ಅಸ್ಪೃಶ್ಯರು..... ಹೀಗೆ ಸಮಾಜದ ವಿವಿಧ ಸ್ತರಗಳಿಗೆ ಸೇರಿದ ಜನರಿಂದ ತುಂಬಿದ ವಿಶಾಲವಾದ ಪ್ರಪಂಚ ಇದಾಗಿದೆ.

ದ್ವೇಷ. ಮೋಹ. ಅಭಿಮಾನ. ಸ್ವಾರ್ಥಸಾಧನೆ. ಕಪಟ ಕಾರಸ್ಥಾನಗಳ ಬಲೆಯಲ್ಲಿ ಸಿಕ್ಕು ಒದ್ದಾಡುವ ಒಂದು ಜೀವಂತ ಸಮಾಜವೇ ಈ ಕಥೆಯ ನಾಯಕ ಪಾತ್ರವನ್ನು ವಹಿಸಿರುವುದರಿಂದ ಪಾತ್ರ ರಚನೆಯಲ್ಲಿ ವೈವಿಧ್ಯವಾಗಲಿ. ಬೆಳವಣಿಗೆಯಾಗಲಿ ಕಂಡುಬರುವುದಿಲ್ಲ. ಇಲ್ಲಿ ವ್ಯಕ್ತಿಗಳ ಬಹುಮುಖ ಚಿತ್ರಣಕ್ಕೆ ಅವಕಾಶವೇ ಇಲ್ಲ. ಆದರೂ ಇಲ್ಲಿಯ ಪಾತ್ರಗಳ ಜೀವಂತತನಕ್ಕಾಗಲಿ. ಮಾನವೀಯತೆಗಾಗಲೀ ಎಲ್ಲಿಯೂ ಚ್ಯುತಿ ಬಂದಿಲ್ಲವೆನ್ನಬಹುದು. ಕಾದಂಬರಿಯ ಬಹುತೇಕ ಪಾತ್ರಗಳು ದುರಂತದಲ್ಲಿ ಅಂತ್ಯವಾಗುತ್ತವೆ.

ಪ್ರಾರಂಭದಲ್ಲಿ ದ್ವೇಷ, ಈರ್ಷೆ, ಸ್ವಾರ್ಥತೆಯಿಂದ ಕೂಡಿರುವ ಪಾತ್ರಗಳು ಪರಿವರ್ತನೆಯನ್ನು ಹೊಂದುವುದು ತಮ್ಮ ಜೀವನ ಮುಕ್ತಾಯವಾಗುವ ಕೊನೆಯ ಕ್ಷಣದಲ್ಲಿ. ಅಂದರೆ ಕಾದಂಬರಿಕಾರರು ಆ ವ್ಯಕ್ತಿಯ ಅಂತ್ಯದ ಮುನ್ಸೂಚನೆಯನ್ನು ಪುನಃ ಪರಿವರ್ತನೆಯ ಮೂಲಕ ತಂದಿದ್ದಾರೆ. ಶಂಕರಗೌಡರು ಸ್ವಾರ್ಥತೆಯನ್ನು ಬಿಟ್ಟು ಊರಿನ ಹಿತವೇ ತನ್ನ ಉದ್ದೇಶ ಎಂಬ ನಿಲುವಿಗೆ ಬರುವುದು. ಪ್ರತಿನಾಯಕ ತಾನು ಮಾಡಿದ ತಪ್ಪಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳುವುದು. ಬಾಪು ಸಾಹೇಬ, ಶೇಷಪ್ಪ, ನಾರಾಯಣ ಈ ಪಾತ್ರಗಳಲ್ಲಿ ಈ ಅಂಶವನ್ನು ಗುರುತಿಸಬಹುದು.

ಈ ಮೊದಲೇ ಹೇಳಿದಂತೆ ಕಾದಂಬರಿಯಲ್ಲಿ ಹತ್ತಾರು ಪಾತ್ರಗಳು ಹಾಸುಹೊಕ್ಕಾಗಿ ಜೀವತುಂಬಿ ಬಂದಿವೆ. ಇವು ಒಂದಲ್ಲ, ಎರಡಲ್ಲ; ಅನೇಕ ಅಸಂಖ್ಯ ಪಾತ್ರಗಳು ಪಯಣಿಸಿದತ್ತ ಕಥೆಯೂ ಸರಿಯುತ್ತದೆ. ಕಥೆಗೂ ಪಾತ್ರಗಳಿಗೆ ಅಭಿನ್ನ ಸಂಬಂಧವಿದೆ. ಪಾತ್ರಗಳಿಲ್ಲದೆ ಕಥೆ ನಡೆಯಲು ಸಾಧ್ಯವೇ ಇಲ್ಲ. ಮಾನವ ಸ್ವಭಾವದ ಬಗೆಗಿನ ತೀವ್ರವಾದ ಆಸಕ್ತಿ ಪಾತ್ರಸೃಷ್ಟಿಯ ಹಿಂದೆ ದುಡಿಯುವ ಪ್ರಾಥಮಿಕ ಶಕ್ತಿ. ಜೀವನ ಅನುಭವಗಳ ವೈಶಾಲ್ಯ, ಧ್ಯೇಯನಿಷ್ಠೆ, ಸೂಕ್ಷ್ಮನಿರೀಕ್ಷಣಶಕ್ತಿ, ಲೋಕದ ವಿಷಯಕ್ಕಿರುವ ಸಹಾನುಭೂತಿ, ಚಿತ್ರಣಶಕ್ತಿ ಇವೆಲ್ಲವುಗಳು ಒಟ್ಟುಗೂಡಿ ಪಾತ್ರದೃಷ್ಟಿಯನ್ನು ಪೂರ್ಣಗೊಳಿಸುತ್ತವೆ. ವ್ಯಕ್ತಿಗೂ ಸಮಾಜಕ್ಕೂ ಇರುವ ಮಾನಸಿಕ ಸಂಬಂಧ, ವ್ಯಕ್ತಿ-ವ್ಯಕ್ತಿಯ ಸಂಬಂಧಗಳು, ಒಬ್ಬನೇ ವ್ಯಕ್ತಿಯಲ್ಲೇ ಸಂಭವಿಸುವ ಮಾನಸಿಕ ಕ್ಷೋಭೆಗಳು ಇವುಗಳ ಆಳವಾದ ಅರಿವು ಕಾದಂಬರಿಕಾರನ ಪಾತ್ರಪ್ರಜ್ಞೆಗೆ ಅಧಿಕೃತತೆಯನ್ನು ತಂದುಕೊಡುತ್ತದೆ. ರಾವಬಹದ್ದೂರರ ವಿಶಾಲವಾದ ಜೀವನಾನುಭವ ಈ ಕಾದಂಬರಿಯ ತಳಹದಿಯಾಗಿದೆ. ಪತ್ರಕರ್ತರಾಗಿದ್ದ ಇವರು ಎಷ್ಟೋ ಜನರೊಡನೆ ತಾವು ಹೊಂದಿದ್ದ ಸ್ನೇಹ-ವಿರಸಗಳು ಅವರ ಸಾಹಿತ್ಯ ನಿರ್ಮಿತಿಗೆ ಅವಶ್ಯಕವಾದ ಹದವನ್ನು ತಂದುಕೊಟ್ಟವೆ. “ಜೀವನವನ್ನು ಸಮಗ್ರವಾಗಿ ನೋಡುವ ಧೀರದೃಷ್ಟಿ, ದಿನನಿತ್ಯದ ಅನೇಕ ಸಂಗತಿಗಳ ನಡುವೆ ಇರಬಹುದಾದ ಸಂಬಂಧವನ್ನು ನೋಡುವ ಕುತೂಹಲ, ಬದುಕಿನ ಒಡಲಿನಲ್ಲಿಯೇ ಹುಟ್ಟಿ, ಬದುಕನ್ನೇ ನುಂಗಲು ಹವಣಿಸುವ ಸಮಸ್ಯೆಗಳ ರಹಸ್ಯವನ್ನು ಅರಿಯುವ ಅಂತರಿಕ ತಳಮಳ ಈ ಕೃತಿಗೆ ಪ್ರೇರಕ ಶಕ್ತಿಯಾಗಿವೆ. ಅದಕ್ಕನುಗುಣವಾಗಿ ಈ ಕಾದಂಬರಿಯ ರಚನೆ ಬಹುಮಟ್ಟಿಗೆ ಮಹಾಕಾವ್ಯದ ರಚನೆಯನ್ನು ಹೋಲುತ್ತದೆ.”

ಹಲವು ಜಾತಿಗಳಿಂದ ಒಡಕು-ಕನ್ನಡಿಯಾದ ಸಮಾಜದ ಚಿತ್ರಣ ಇಲ್ಲಿದೆ. ಇಲ್ಲಿ ನಿರೂಪಿಸಲಾದ ವ್ಯಕ್ತಿಗಳನ್ನು ಇಂದು ಪ್ರತಿ ಹಳ್ಳಿಯಲ್ಲಿಯೂ ಕಾಣಬಹುದು. ಇಲ್ಲಿ ಆಯಾ ಜಾತಿಗಳ ಗುಣ-ದೋಷಗಳನ್ನು ವಿವರಿಸುವ ಗೋಜಿಗೆ ಹೋಗದೆ ಸಮಾಜದ ನೈಜಸ್ಥಿತಿಯನ್ನು ಚಿತ್ರಿಸುವಲ್ಲಿ ಕೃತಿ ಯಶಸ್ವಿಯಾಗಿದೆ. ಪಡದಯ್ಯ, ಶೇಷಪ್ಪ, ಲಿಂಗಪ್ಪಗೌಡರಂಥ

ಸಮಾಜ ಕಂಟಕರು. ಬಾಳಾಚಾರ್ಯರು. ಶಿವಯೋಗಿಗಳಂಥ ಆದರ್ಶದ ಕನಸಿಗರು. ಶಂಕರಪ್ಪಗೌಡರಂತಹ ತೀವ್ರ ಅಭಿಮಾನವುಳ್ಳವರು. ಗುಣವಂತರಾಯರಂತಹ ದಯಾಳುಗಳು. ಜೀವನದಲ್ಲಿ ನಡೆದು ಕೊಂಡ ಒಂದು ಕ್ಷಣದ ತಪ್ಪಿಗೆ ತಮ್ಮ ಬದುಕನ್ನೇ ನಾಶಮಾಡಿಕೊಂಡ ಚಿಮಣಾ ಮತ್ತು ಪುತಳಾಬಾಯಿ. ಸಾಹಸ. ಧೈರ್ಯದ ವ್ಯಕ್ತಿತ್ವವುಳ್ಳ ದಾದಾ- ಈ ವ್ಯಕ್ತಿಗಳಲ್ಲಿ ಅವಿಸ್ಮರಣೀಯರಾಗಿದ್ದಾರೆ. ಪಾಳಿಕಾರ ಮಲ್ಲ. ಜೈನರ ಜಿನ್ನಪ್ಪ. ಮಾದರಚನ್ನ, ಚಂದ್ರಿ ಮೊದಲಾದ ಉಪಪಾತ್ರಗಳು ಕೂಡ ಸಜೀವವಾಗಿ ವರ್ತಿಸುತ್ತವೆ.

ಅಧ್ಯಯನದ ಉದ್ದೇಶದಿಂದ ಇಲ್ಲಿನ ಪಾತ್ರಗಳನ್ನು ಪುರುಷ ಪಾತ್ರಗಳು ಮತ್ತು ಸ್ತ್ರೀಪಾತ್ರಗಳು ಎಂದು ವಿಭಾಗಿಸಿಕೊಂಡು ಅವರಲ್ಲಿ ಮುಖ್ಯವಾದ ಕೆಲವು ಪಾತ್ರಗಳನ್ನು ಮಾತ್ರ ಚಿತ್ರಿಸಲಾಗಿದೆ.

## ಬಾಳಾಚಾರ್ಯರು

ಗ್ರಾಮಾಯಣ ಕಾದಂಬರಿಯಲ್ಲಿ ಕೇಂದ್ರ ವ್ಯಕ್ತಿಯಾಗಿ ನಿಲ್ಲಬಲ್ಲ ಯೋಗ್ಯತೆ ಬಾಳಾಚಾರ್ಯರಲ್ಲಿ ಮಾತ್ರ ಕಂಡುಬರುತ್ತದೆ. ಅವರ ಜೀವನದ ಏರಿಳಿತದಲ್ಲಿ ಕಾದಂಬರಿಯ ಅರ್ಥ ಹುದುಗಿದೆ. "ಪಾದಕ್ಕಿಗೆ ಒಂದು ಆತ್ಮವಿದ್ದರೆ ಅದನ್ನು ಬಾಳಾಚಾರ್ಯನಲ್ಲಿಯೇ ಹುಡುಕಬೇಕಾಗುತ್ತದೆ"[1] ಪಾದಕ್ಕಿಯ ಬಗ್ಗೆ ಅಪಾರವಾದ ಪ್ರೀತಿ. ಅಭಿಮಾನವಿರುವ ವ್ಯಕ್ತಿ. ತಮ್ಮೂರಿಗೆ ಬಂದೊದಗಿರುವ ಸಂಕಟವನ್ನು ಹೇಗಾದರೂ ಮಾಡಿ ನಿವಾರಿಸಬೇಕೆಂಬ ತವಕವುಳ್ಳವರಾಗಿದ್ದಾರೆ. ದೇವರಲ್ಲಿ. ಪರಂಪರೆಯಲ್ಲಿ ನಂಬಿಕೆಯಿರುವ ಧಾರ್ಮಿಕ-ಮನೋಧರ್ಮದ ವ್ಯಕ್ತಿ. ಕಾದಂಬರಿಯ ಪ್ರಾರಂಭದಲ್ಲಿ ಅವರು ಊರಿನ ಪ್ರಮುಖರಲ್ಲಿ ಒಬ್ಬರಾಗಿದ್ದು, ಪಂಚಾಯಿತಿಯ ಸದಸ್ಯರು. ಅವರಲ್ಲಿ ಸಾಕಷ್ಟು ಬುದ್ಧಿವಂತಿಕೆಯಿದ್ದರೂ ಅದು ಮೊದಮೊದಲಿಗೆ ಪ್ರತಿಷ್ಠೆ. ದೂರ್ತತನವಾಗಿಯೇ ಕಾಣುತ್ತಿತ್ತು. ಆದರೆ ನಾನಾನ ಮರಣದ ನಂತರ ದೈವದ ಸಭೆಯಲ್ಲಿ ನಡೆದ ತೀರ್ಮಾನ. ಹಿರಿಯರುಗಳ ದುಷ್ಟತನ. ಸ್ವಾರ್ಥಗಳು ಅಳತೆ ಮೀರಿದಾಗ ಅವರ ಮನಸ್ಸು ವಿಮುಖವಾಗುತ್ತದೆ. ತದನಂತರ ಕರ್ಮಪ್ರವೃತ್ತರಾಗಿ ಅವುಗಳಿಂದ ದೂರ ಉಳಿಯುತ್ತಾರೆ.

ಪ್ರಾರಂಭದಲ್ಲಿ ಬಾಳಾಚಾರ್ಯರು ಅಭಿಮಾನ. ದ್ವೇಷ. ಹಠಮಾರಿತನದ ಸ್ವಭಾವದವರಾಗಿ ಕಾಣುತ್ತಾರೆ. ತನ್ನ ತಮ್ಮನ ಮಗನೊಬ್ಬಗಿನ ಆಸ್ತಿ ಕಲಹದಲ್ಲಿ ಕೋರ್ಟಿಗೆ ಹೋಗಿ ಕೊನೆಗೆ ಆಸ್ತಿಯನ್ನು ತಮ್ಮದಾಗಿ ಮಾಡಿಕೊಂಡಿರುತ್ತಾರೆ. ಗೌಡರೊಂದಿಗೆ ಉಂಟಾದ ಸಣ್ಣ ಮನಸ್ತಾಪಕ್ಕೆ ವರ್ಷಗಟ್ಟಲೆ ಅವರ ಮನೆಯ ಬೀದಿಯಲ್ಲಿ ಸಂಚರಿಸುವುದನ್ನು ಬಿಟ್ಟಿದ್ದವರು. ನಾರಣಾಚಾರಿಗೆ ಕೊಟ್ಟ ಮಾತು ಉಳಿಸಲು ಮಾಮಲೇದಾರರ ಮನೆಯ ಗಂಗಾರಾಧನೆ ಕೆಲಸವನ್ನು ಮಾಡಲು ನಿರಾಕರಿಸುತ್ತಾರೆ. ಒಮ್ಮೆ ನಿರ್ಧರಿಸಿದರೆ ಅ

ನಿರ್ಧಾರದಿಂದ ವಿಮುಖರಾಗುವುದು ಬಾಳಾಚಾರ್ಯರ ಜಾಯಮಾನವಲ್ಲ. ಇಂಥ ಬಾಳಾಚಾರ್ಯರು ದುರಂತದೆಡೆಗೆ ಸಾಗುತ್ತಿರುವ ಪಾದಕ್ಕಿಯನ್ನು ಹೇಗಾದರೂ ಮಾಡಿ ಉಳಿಸಬೇಕೆಂಬ ಕಳಕಳಿಯಿಂದ ತಮ್ಮ ಶಕ್ತಿ ಮೀರಿ ಪ್ರಯತ್ನಿಸುತ್ತಾರೆ. ಊರಿನ ಅಭಿಮಾನ ಕೇಂದ್ರವಾದ ವಾಡೆ. ಪಾವಿತ್ರ್ಯದ ಸಂಕೇತವಾದ ಮಠ ಇವೆರಡನ್ನು ಬಾಪುಸಾಹೇಬ ಮತ್ತು ಪಡದಯ್ಯ ಇಬ್ಬರು ಹಾಳು ಮಾಡುತ್ತಿದ್ದಾರೆಂಬ ತಮ್ಮ ಆತಂಕವನ್ನು ಹೀಗೆ ವ್ಯಕ್ತಪಡಿಸುತ್ತಾರೆ. "ಪಡದಯ್ಯನ ಗೆಳೆತನ ವಾಡೇದ ಮರ್ಯಾದಿಗೆ ಮುಳ್ಳಾಗೇದ. ವಾಡೇ ಅಂದರ ಊರ ಅಭಿಮಾನ ಪಾಟೀಲರ. ಅದನ್ನು ಇವರಿಬ್ಬರೂ ಹೀಂಗ ಹಾಳಾದರ ಪಾದಕ್ಕಿ ಬೇಚಿರಾಕ ಆದಾಂಗ" ಎಂದು ದುಃಖಿಸುತ್ತಾರೆ.

ಪಾದಕ್ಕಿಯಲ್ಲಿನ ಕೆಲವು ಘಟನೆಗಳು ಆಚಾರ್ಯರ ಜೀವಸತ್ವವನ್ನೇ ಹೀರಿದ್ದವು. ಇದರ ಜೊತೆಗೆ ತಮ್ಮ ಮಗ ಮೊದಲೇ ತೀರಿಹೋಗಿರುವುದರಿಂದ ಗಂಭೀರರಾಗುತ್ತಾರೆ. ಅವರಲ್ಲಿ ಸ್ವಾರ್ಥಸಾಧನೆಯ ಆಸೆಯೂ ಇಲ್ಲ. ಮನೆ ಬರಿದಾದ ಮೇಲೆ ಅನಿವಾರ್ಯವಾಗಿ ಲೋಕಕ್ಕೆ ಅಂಟಿ ಕೊಳ್ಳುತ್ತಾರೆ. ಮನೆತನದ ವೈದಿಕ ಸಂಪ್ರದಾಯ ಅವರ ಧಾರ್ಮಿಕತೆಗೆ ಮತ್ತಷ್ಟು ಪುಟಕೊಟ್ಟಿತು. ಚಳಿಯಿರಲಿ. ಮಳೆಯಿರಲಿ ನಸುಕಿನಲ್ಲೆದ್ದು ಕೃಷ್ಣಾನದಿಯಲ್ಲಿ ಮಿಂದು ಗೋಪಾಲಕೃಷ್ಣ ಗುಡಿಯಲ್ಲಿ ಪುರಾಣವನ್ನೋದುವುದು ಇವರ ನಿತ್ಯ ಕಾಯಕವಾಗಿತ್ತು. ಇದರೊಟ್ಟಿಗೆ ಲೋಕಹಿತದ ಕಾರ್ಯಗಳು ಸೇರಿಕೊಂಡಿದ್ದವು. ಅನೈಕ್ಯತೆ ಎಂಬುದು ಒಂದು ಕುಟುಂಬವನ್ನು. ಸಮಾಜವನ್ನು ಹೇಗೆ ಅವನತಿಗೆ ತಳ್ಳುತ್ತದೆಂಬುದರ ಬಗ್ಗೆ ಚಿಂತಿಸುವ ಆಚಾರ್ಯರ ಮನಸ್ಸು ತಮ್ಮ ಮನೆತನದ ಇತಿಹಾಸದಿಂದ ಪಾದಕ್ಕಿಯ ಜೀವನ ಕ್ರಮದೆಡೆಗೆ ಸಾಗುತ್ತದೆ. ತಮ್ಮ ಅರವತ್ತು ವರ್ಷಗಳ ಜೀವನಾನುಭವ. ಪರಂಪರಾಗತವಾದ ವಿದ್ಯೆ. ಜನ್ಮಜಾತ ಬುದ್ಧಿಶಕ್ತಿ- ಇವುಗಳಾವುವೂ ಪಾದಕ್ಕಿಯ ಸಮಸ್ಯೆಯನ್ನು ಬಗೆಹರಿಸುವಲ್ಲಿ ವಿಫಲವಾಗುತ್ತವೆ.

ಬಾಳಾಚಾರ್ಯರ ಮನಸ್ಸು ಪಾದಕ್ಕಿಯ ಉದ್ಧಾರಕ್ಕೆ ಹೇಗೆ ತವಕಿಸುತ್ತಿದ್ದೆಂಬುದನ್ನು ಮತ್ತು ತಮ್ಮ ಅರವತ್ತು ವರ್ಷಗಳ ಅನುಭವದಲ್ಲಿ ಪಾದಕ್ಕಿಯ ಸ್ಥಿತಿಗತಿಗಳ ಬಗೆಗೆ ೮ನೇ ಅಧ್ಯಾಯದಲ್ಲಿ ದೀರ್ಘವಾಗಿ ಅವಲೋಕಿಸುತ್ತಾರೆ. "ಬಾಳಾಚಾರ್ಯರ ಮನಸ್ಸು ಪಾದಕ್ಕಿಯ ಜೀವ ಕ್ರಮವನ್ನು ಮತ್ತೊಮ್ಮೆ ಪುನರ್ರಚಿಸಿ ನೋಡಿಕೊಂಡಿತು. ಅರವತ್ತು ವರ್ಷ ಅದೇ ಊರಲ್ಲಿಯೇ ಬಾಳು ಕಳೆದ ಅವರಿಗೆ ಆ ಊರಿನ ಹಾದಿ-ಬೀದಿಗಳು. ಮನೆ-ಮಠಗಳು. ಜನರ ಮುಖಗಳು ತಮ್ಮ ಪುರಾಣದ ಓಲೆಯ ಗರಿಗಳಷ್ಟು ಪರಿಚಿತವಾಗಿತ್ತು. ಅಂದ ಮೇಲೆ ಮೊದಲಿದ್ದ ಸುಖ ಸಮಾಧಾನಗಳು ಈಗ ಎಲ್ಲಿ ಹಾರಿ ಹೋದವು? ..... ಈ ಜನ್ಮಕ್ಕೆ ಆಗಿರುವುದಾದರೂ ಏನು? ನಾನಾನ ಮರಣವಾಗಿ ಮೂರು ತಿಂಗಳಾದರೂ ಅದರ ಪರಿಣಾಮವಾಗಿ ಉಂಟಾದ ದ್ವೇಷಾಸೂಯೆಗಳು ತೆರೆಗಳಂತೆ ಇನ್ನೂ ಅಪ್ಪಳಿಸುತ್ತಲೆ

ಇವೆ. ಇದಕ್ಕೆಲ್ಲ ಏನು ಕಾರಣ ? ಅಥವಾ ಈ ಅಕಾಂಡ ತಾಂಡವದ ಅವ್ಯವಸ್ಥೆಯಲ್ಲಿಯೇ ಹೊಸ ಬಾಳಿನ ವ್ಯವಸ್ಥೆ ರೂಪಗೊಳ್ಳಲಿದೆಯೇ? ಇರಬೇಕು. ಜನರು ಮೊದಲಿನಂತೆ ತಮ್ಮ ನೆಲವನ್ನು ಪ್ರೀತಿಸುವುದಿಲ್ಲ. ಈ ಗೌಡರು ಪಾದಳ್ಳಿಯ ಪ್ರತಿಯೊಂದು ಕೇರಿಯನ್ನು ಅಭಿಮಾನದಿಂದ ನೋಡಿಕೊಳ್ಳುವ ಗೌಡರು ಈಗ ಬಣಕಟ್ಟಲು ಹೊರಟಿದ್ದಾರೆ. ವಾಡೆಯ ವೈಭವ ಈಗ ಬರಿಯ ಕನಸಾಗಿದೆ. ಊರ ಅಭಿಮಾನವಾಗಿದ್ದ ಮಠ ಕುಡುಕರಿಗೆ ಆಶ್ರಯವಿತ್ತು ಈಗ ಜೀರ್ಣವಾಗಿದೆ. ಬಹುಶಃ ಜನರಿಗೆ ತಮ್ಮ ಊರ ಮೇಲಿನ ಅಭಿಮಾನವೇ ಇಲ್ಲದಾಗಿರಬೇಕು. ತಮ್ಮ ಮನೆತನದ ಸ್ಥಿತಿಗತಿಯೇ ಉಂಬನಾಗಿರಬೇಕು. ತಲೆಬಂಡನಂತೆ ಆಶ್ರಯ ಸ್ಥಾನವಾಗಿದ್ದ ಹೊಲಗಳನ್ನೇ ಮಾರಿ ಬಿಟ್ಟ ಬಯಲಿನಲ್ಲಿ ನಿಂತ ತಮ್ಮ ಮಕ್ಕಳ ಚಿತ್ರ ಆಚಾರ್ಯರ ಕಣ್ಣೆದುರು ಕಟ್ಟಿತು.

ಯಾವ ಪಾಪದ ಫಲ ಇದೆಲ್ಲ? ಈ ಪಾಪದ ಉಗಮವಾದರೂ ಎಲ್ಲಿದೆ ಅಥವಾ ಜೀವನವನ್ನು ರೂಪಿಸುವ ಹೊಣೆಯೇ ನಮ್ಮದಲ್ಲವೇನೋ? ಹಾಗಿದ್ದರೆ ಅದನ್ನು ರೂಪಿಸುವ ಶಕ್ತಿ ಯಾವುದು ? ....ಪಾದಳ್ಳಿಯ ನೆಲದ ಸತ್ವ ತೀರಿ ಹೋಗಿರಬೇಕು. ಸಾಗುಮಾಡದ ಹೊಲದಲ್ಲಿ ಗಿಡಗಂಟಿ ಬೆಳೆದರೆ ತಪ್ಪೇನು? ಪಾದಳ್ಳಿಯ ನೆಲ ನಿತ್ರಾಣವಾಗಿದೆಯೇನೋ? ಇಲ್ಲದಿದ್ದರೆ ಈ ರೀತಿಯ ವಿಕೃತಿಯೇ? ಅಥವಾ ಜೀವನದಲ್ಲಿ ಪಾಪ ಅಪರಿಹಾರ್ಯವೇ? ಭಗವಂತ ಇಂಥ ವೇಳೆಯಲ್ಲಿಯೇ ಅವತಾರ ಮಾಡುತ್ತಾನೆ ಎಂದಿಲ್ಲವೇ? ಎಲ್ಲಿ ? ಎಲ್ಲಿ? ಪ್ರಶ್ನೆ ಭೂತವಾಗಿ ಕಾಡುತ್ತದೆ”.

ಪಾದಳ್ಳಿಯ ದುಸ್ಥಿತಿಗೆ ನೊಂದ ಆಚಾರ್ಯರು ಒಮ್ಮೊಮ್ಮೆ ತಾವು ವೈದಿಕ ಬ್ರಾಹ್ಮಣ. ಲೌಕಿಕ ವ್ಯವಹಾರಗಳ ಬಂಧನ ತಮಗಿಲ್ಲ. ಪಾದಳ್ಳಿಯ ಬಂಧನ ತಮಗಿಲ್ಲವೆಂದು ಕೊಳ್ಳುತ್ತಾರೆ. ತಕ್ಷಣವೇ ಪಾದಳ್ಳಿಯ ಋಣ ತಮ್ಮ ಮೇಲಿದೆ. ಆ ಋಣವನ್ನು ತೀರಿಸಲೇಬೇಕು. ತಮ್ಮ ಆಯುಷ್ಯವನ್ನೆಲ್ಲ ಅದರಲ್ಲಿಯೇ ಕಳೆಯಬೇಕೆಂಬ ನಿರ್ಧಾರಕ್ಕೆ ಬರುತ್ತಾರೆ. ಅಲ್ಲದೆ ಪುನರ್ಜನ್ಮವಿದ್ದರೆ ಮತ್ತೆ ಗೋಪಾಲಕೃಷ್ಣನ ಗುಡಿಯ ವೃಂದಾವನದಲ್ಲಿ ತುಳಸಿಯ ಸಸಿಯಾಗಿ ಹುಟ್ಟಬೇಕು ಎಂಬ ಅವರ ಆಸೆ ಪಾದಳ್ಳಿಯ ನೆಲದೊಂದಿಗಿನ ಆಚಾರ್ಯರ ಅವಿನಾಭಾವ ಸಂಬಂಧದ ಪ್ರತೀಕವಾಗಿದೆ. ಈ ಊರಿನ ಹಿತವನ್ನು ಕಾಪಾಡುವಲ್ಲಿ ಆಚಾರ್ಯರು ಸದಾ ಸನ್ನದ್ಧರಾಗಿರುತ್ತಾರೆ. ಪಡದಯ್ಯನಿಂದ ಮಠ ಮಾತ್ರವಲ್ಲದೆ ಇಡೀ ಊರು ನಾಶವಾಗುತ್ತದೆಂದರಿತ ಆಚಾರ್ಯರು ಹೇಗಾದರೂ ಸರಿ ಪಡದಯ್ಯನ ಹುಚ್ಚು ಹಾರಾಟವನ್ನು ನಿಲ್ಲಿಸಬೇಕೆಂದು ನಿರ್ಧರಿಸುತ್ತಾರೆ. “ಮಾತಿಗೂ ಕೃತಿಗೂ ಫಾಕಿಲ್ಲದ ಮನುಷ್ಯ ಪಡದಯ್ಯ. ಇಂಥವನ ಕಕ್ಕ್ಯಾತರಾಟ ಊರು ಎಷ್ಟಂತ ತಡಕೋಬೇಕೋ. ಮತ್ತೆ ಯಾಕ ತಡಕೋಬೇಕು? ಇವನ ಸಂಗತಿ. ಹಾವಿನ ಸಂಗತಿ ಎರಡೂ ಸಮಾ” ಹಾಗಾಗಿ ಆತನ ಹಿಡಿತದಿಂದ ಊರನ್ನು ಕಾಪಾಡಬೇಕೆಂದು ಆಚಾರ್ಯರು ಗಂಭೀರವಾಗಿ ಚಿಂತಿಸುತ್ತಾರೆ.

ಕಾಲರಾ ಪಿಡುಗು ಇಡೀ ಊರನ್ನೇ ಆಕ್ರಮಿಸುತ್ತಿರುವ ಸಂದರ್ಭದಲ್ಲಿ ಆಚಾರ್ಯರು ತೋರುವ ಸಹಾನುಭೂತಿ. ಜನರ ನೋವಿಗೆ ಸ್ಪಂದಿಸುವ ಗುಣ ನಿಜಕ್ಕೂ ಅನನ್ಯವಾದದ್ದು. ಕಾಯಿಲೆ ಬಿದ್ದವರಿಗೆ ತಮ್ಮಲ್ಲಿರುವ ಚಕ್ರಾಣಿಬೇರನ್ನು ತೇಯ್ದು ಔಷಧ ಕೊಡುವುದು. ಸತ್ತವರ ಮನೆಗಳಿಗೆ ಹೋಗಿ ಧೈರ್ಯ ಹೇಳುವುದು ನಿರಂತರವಾಗಿ ನಡೆದಿತ್ತು. ಬ್ರಹ್ಮಲಿಖಿತದ ಮುಂದೆ ಯಾರ ಆಟವೂ ನಡೆಯದು. ಕರ್ಮಫಲದಂತೆ ವಿಧಿ ನಡೆಸುವ ಸತ್ವಪರೀಕ್ಷೆ ಯಾರಿಗೂ ಬಿಟ್ಟದ್ದಲ್ಲ ಎಂಬ ಸತ್ಯ ಅವರಿಗೆ ಮನವರಿಕೆಯಾಗಿತ್ತು. ತಾವು ಧನ್ವಂತರಿಯೂ ಅಲ್ಲ. ತಮ್ಮ ಚಕ್ರಾಣಿ ಬೇರು ಸಂಜೀವಿನಿಯೂ ಅಲ್ಲ ಎಂಬ ಮಾತು ಅವರಿಗೆ ತಿಳಿದಿದ್ದರೂ ಕೂಡ ಅವರ ಅಂತರಂಗದ ವಿಶ್ವಾಸ ಕಡಿಮೆಯಾಗಲಿಲ್ಲ. ತಮ್ಮ ಪ್ರಯತ್ನದಿಂದ ಒಂದಾದರೂ ಜೀವ ಉಳಿಯಬಹುದೆಂಬ ಅದಮ್ಯ ಬಯಕೆ ಅವರಲ್ಲಿತ್ತು. ಸ್ವತಃ ತನ್ನ ತಮ್ಮನ ಮಗ ಸತ್ತಾಗಲೂ ಅಂತ್ಯ ಸಂಸ್ಕಾರಕ್ಕೆ  ಹೋಗದೆ ಜನರ ನೋವಿಗೆ ಸ್ಪಂದಿಸುತ್ತಿದ್ದುದು ಅವರ ದೊಡ್ಡಗುಣವನ್ನು ಸೂಚಿಸುತ್ತದೆ.

ಬಾಳಾಚಾರ್ಯರಿಗೆ ದಾದಾನ ಬಗೆಗೆ ವಿಶೇಷವಾದ ಅಭಿಮಾನ. ಪ್ರೀತಿ ಇದೆ. ಪಾದಕ್ಷೆಯ ಆಶಾಕಿರಣವೆಂದರೆ ದಾದಾ ಎಂದು ನಂಬಿದ್ದರು. ದುಷ್ಟಶಕ್ತಿಗಳನ್ನು ಮಟ್ಟಹಾಕಿ ಮುಳುಗಬಹುದಾದ ಪಾದಕ್ಷೆಯ ಪುಣ್ಯವನ್ನು ರಕ್ಷಿಸುತ್ತಾನೆ. ಪಾದಕ್ಷೆಯ ಮಾನರಕ್ಷಣೆ ಈತನಿಂದ ಮಾತ್ರ ಸಾಧ್ಯವೆಂಬ ನಂಬಿಕೆ ಇದೆ. ಹವಾಲ್ದಾರರು ದಾದಾನನ್ನು ಬಂಧಿಸಲು ಬಂದಾಗ ಧಾರ್ಮಿಕ ನಿಷ್ಠರಾದ ಆಚಾರ್ಯರು ಮರಾಠಿ ಹುಡುಗನೊಬ್ಬನನ್ನು ತಮ್ಮ ದೇವರ ಮನೆಯಲ್ಲಿ ಬಚ್ಚಿಡುತ್ತಾರೆ. ಇದು ನಿಜಕ್ಕೂ ಆಶ್ಚರ್ಯಕರ ಸಂಗತಿ. ಇಲ್ಲಿ ಆಚಾರ್ಯರ ಹೃದಯ ವೈಶಾಲ್ಯತೆ ಗೋಚರವಾಗುವುದರ ಜೊತೆಗೆ ಈ ರೀತಿಯ ಸನ್ನಿವೇಶದ ಚಿತ್ರಣ ಲೇಖಕರಿಗಿರುವ  ದಾದಾನ ಮೇಲಿನ ಒಲವು ಇರಬಹುದೇ ? ಎಂಬ ಸಂಶಯ ಸಹಜವಾಗಿ ಬರುತ್ತದೆ. ಏನೇ ಆದರೂ ಆಚಾರ್ಯರು ದಾದಾನ ಮೇಲೆ ಇರುವ ಅಭಿಮಾನ ದೊಡ್ಡದು. ಹಾಗಾಗಿ ಈತನನ್ನು ಉಳಿಸುವ ಸಲುವಾಗಿ ಮಹಾರಾಜರೊಟ್ಟಿಗೆ ಕಳುಹಿಸಿಕೊಡುವಂತೆ ಲಕ್ಷ್ಮಣನನ್ನು ಒಪ್ಪಿರುತ್ತಾರೆ.

ಆಚಾರ್ಯರಿಗೆ ಶೇಷಪ್ಪನ ಕಾಯಿದೆ ಪಾಂಡಿತ್ಯವಾಗಲಿ. ಶಂಕರಪ್ಪಗೌಡರ ವರ್ಚಸ್ಸಾಗಲಿ ಅವರಿಗಿಲ್ಲ. ಇಷ್ಟೇ ಅಲ್ಲ ಅವರಿಗೆ ಕನ್ನಡ ಲಿಪಿಯನ್ನು ಓದಲು ಕೂಡ ಬರುವುದಿಲ್ಲ. ಅವರು ಓದಿ ಮನನ ಮಾಡಿಕೊಂಡಿರುವ ಗ್ರಂಥಗಳೆಂದರೆ ಭಗವದ್ಗೀತೆ. ಭಾಗವತ ಪುರಾಣ. ಇವುಗಳಿಂದ ದೊರೆತ ಜ್ಞಾನ ಆತ್ಮೋದ್ಧಾರಕ್ಕೆ ಹೊರತು ಸುತ್ತಲಿನ ಜೀವನಕ್ಕೆ ಅದರಿಂದೇನೂ ಉಪಯೋಗವಿಲ್ಲವೆಂಬುದು ಅವರಿಗೆ ಗೊತ್ತಿದೆ. ಆದರೂ ಅವರು ಸುತ್ತಮುತ್ತಲಿನ ಬಾಳುವೆಯನ್ನು ಅರಿತವರು. ಆ ಬಾಳನ್ನು ಸರಿಪಡಿಸಲು ನಿರಂತರವಾಗಿ ಹೋರಾಟ ಮಾಡುತ್ತಾರೆ. ಬದುಕಿನಲ್ಲಿ ದೃಢತೆ ಬರದ ಹೊರತು ಬಾಳನ್ನು ಎದುರಿಸುವುದು ಸಾಧ್ಯವಿಲ್ಲ ಎಂಬ ಸತ್ಯ ಅವರಿಗೆ ಗೊತ್ತಿದೆ.

“ತಮ್ಮ ಮನೆಯಲ್ಲಾದ ಅವ್ಯವಸ್ಥೆಯ- ಬೆಳಕಿನಲ್ಲಿ ಅವರು ಇಡೀ ಊರಿನ ಅವ್ಯವಸ್ಥೆಯನ್ನು ಪರೀಕ್ಷಿಸುತ್ತಾರೆ. ಕಾದಂಬರಿ ಮುಂದುವರಿದಂತೆಲ್ಲ ಆಚಾರ್ಯರ ಪ್ರಜ್ಞಾವಲಯ ವಿಸ್ತರಿಸುತ್ತ ಹೋಗುತ್ತದೆಯಲ್ಲದೆ ಜೀವನದ ಗಹನತೆಯೂ ಅವರ ಕಣ್ಣಿಗೆ ಕಟ್ಟುತ್ತದೆ. ಎರಡು ವಿರೋಧಗಳ ನಡುವಿನ ಧರ್ಮಸೂಕ್ಷ್ಮವನ್ನು ಅವರು ಹೆಜ್ಜೆಹೆಜ್ಜೆಗೂ ಅರಿತುಕೊಳ್ಳಬೇಕಾಗುತ್ತದೆ. ಸೋಲು ಎದುರಾದಾಗಲೆಲ್ಲ ಜೀವನದ, ಧರ್ಮದ ಸಂಕೀರ್ಣತೆಯನ್ನು ಅರಿಯುವ ಮಟ್ಟಿಗೆ ಅವರ ಪ್ರಜ್ಞೆ ಸ್ಫುರವಾಗುತ್ತದೆ. ಅವರ ವರ್ತನೆಯೂ ವಿರೋಧಮಯವಾಗುತ್ತದೆ. ಅನ್ಯ ಜಾತಿಯವನಾದ ದಾದಾನನ್ನು ಪೊಲೀಸರು ಬೆನ್ನು ಹತ್ತಿದಾಗ ಅವನನ್ನು ತಮ್ಮ ದೇವರ ಮನೆಯಲ್ಲಿ ಮುಚ್ಚಿಡುತ್ತಾರೆ. ಬಿಮಾರಾ ಸತ್ತು ಕೂಸು ಉಳಿದಾಗ ಅದನ್ನು ತಾವೇ ಹೊಲೆಯರಿಗೆ ಒಪ್ಪಿಸುತ್ತಾರೆ. ಎಷ್ಟು ಪ್ರಯತ್ನಿಸಿದರೂ ಜೀವನ ತಮ್ಮ ಕೈಮೀರಿ ಹೋಗುತ್ತಿರುವುದನ್ನು ನೋಡಿದಾಗ ಕೊನೆಯಲ್ಲಿ ಮೂಲಭೂತವಾದ ಕತ್ತಲಿನಲ್ಲಿ ನಿಂತುಬಿಡುತ್ತಾರೆ”. ಈ ಜೀವನ ಮನುಷ್ಯನ ಅಂತಃಸತ್ವವನ್ನೇ ಪರೀಕ್ಷಿಸಲೆಂದು ನಿರ್ಮಿತವಾದ ಈಶ್ವರನ ಮಾಯೆಯಿರಬೇಕೆಂದು ಕೊಳ್ಳುತ್ತಾರೆ. ಒಂದೆ ತಾವೆಲ್ಲ ಕೂಡಿ ಮಾಡಿದ ಅನ್ಯಾಯ. ಪಾಪಕ್ಕೆಲ್ಲ ಪ್ರಾಯಶ್ಚಿತ್ತವನ್ನು ಅನುಭವಿಸಲೇಬೇಕೆಂದುಕೊಳ್ಳುತ್ತಾರೆ.

ಗಿಬ್ಸನ್ ಸಾಹೇಬರ ಅಲಕ್ಷ್ಯ. ಬಡದಯ್ಯನವರ ದುಷ್ಟ ಪ್ರಯತ್ನ. ಊರ ಹಿರಿಯರುಗಳ ಹೊಣೆಗೇಡಿತನಗಳಿಂದ ಪಾದಳ್ಳಿ ಅವನತಿಯತ್ತ ಸಾಗುತ್ತಿದೆ. ದುಷ್ಟಶಕ್ತಿಗಳ ಅಟ್ಟಹಾಸದಿಂದ ಇಡೀ ಪಾದಳ್ಳಿ ಜರ್ಜರಿತವಾಗಿದೆ. ಇಲ್ಲಿ ನಡೆದ ಘಟನೆಗಳೆಲ್ಲ ಆಚಾರ್ಯರ ಅಂತರಂಗವನ್ನು ಕಲಕುತ್ತವೆ. ಕೃಷ್ಣಾನದಿಯ ಸೆಳವಿನ ವಿರುದ್ಧ ಪ್ರತಿನಿತ್ಯ ಈಸುವ ಆಚಾರ್ಯರು ಪಾದಳ್ಳಿಯಲ್ಲಿ ಆಳವಾಗಿ ಬೇರು ಬಿಟ್ಟಿರುವ ಈರ್ಷ್ಯೆ. ದ್ವೇಷ. ಕಾದಾಟ ಮೊದಲಾದ ಪ್ರವಾಹದ ವಿರುದ್ಧ ಈಜುವಲ್ಲಿ ವಿಫಲರಾಗುತ್ತಾರೆ. ಗೌಡರ ಮನೆತನವನ್ನು ವಶಪಡಿಸಿಕೊಳ್ಳಲು ಬಂದಾಗ ಏಕಾಂಗಿಯಾಗಿ ನಿಂತು ಬಡದಪ್ಪ. ಲಿಂಗಪ್ಪ. ಊರಿನ ಜನರೆಲ್ಲರನ್ನು ಎದುರಿಸಿದ್ದ ಆಚಾರ್ಯರು ಕೊನೆಗೆ “ಪಾರ್ವತೆಪ್ಪ ಆ ಭೂಮಿ ಲಿಂಗಪ್ಪಗ ಕೊಟ್ಟುಬಿಡಲಿ. ಅವನ ಋಣಾನೂ ಇದ್ದೀತು.” ಎಂದು ನುಡಿಯುತ್ತಾರೆ. ಮುಂದುವರೆದು “.....ಈ ನ್ಯಾಯದೊಳಗ ನನಗೇನು ಸುಖಾ ಕಾಣವಲ್ಲದು. ಇಂಥಾ ನ್ಯಾಯ ನಡನಡದ ಊರ ಪರಿಸ್ಥಿತಿ ಹೀಂಗ ಗೊಂದಲಗೆಟ್ಟದ್ದು”– ಎಂದು ಕೋರ್ಟು-ಕಛೇರಿ ನ್ಯಾಯ ಎಂದು ಅಲೆಯುವುದು ವ್ಯರ್ಥ ಪ್ರಯತ್ನ ಎಂಬ ನಿಲುವಿಗೆ ಬರುತ್ತಾರೆ. ತಮ್ಮ ಸುದೀರ್ಘ ಬಾಳಿನ ಜೊತೆಗಾತಿಯಾಗಿದ್ದ ಪತ್ನಿ ಸತ್ತಾಗಲೂ ಕೂಡ ಆಚಾರ್ಯರು ವಿಚಲಿತರಾಗುವುದಿಲ್ಲ. ಅವರ ಮನಸ್ಸು ಒಂದೇ ಸಮನೆ ಗೀತೆಯ ಶ್ಲೋಕಗಳನ್ನು ನುಡಿಯುತ್ತಿತ್ತು. ದೇವರಲ್ಲಿ ನಂಬಿಕೆಯಿರುವ ಆಚಾರ್ಯರು ಶಾಂತಿ-ಸಮಾಧಾನಗಳನ್ನು ಪಡೆಯಲು ಭಾಗವತ ವಚನಕ್ಕೆ ಮೊರೆಹೋಗುತ್ತಾರೆ.

ಜೀವಮಾನದ ಕೊನೆಯವರೆಗೂ ಪಾದಳ್ಳಿಯ ಉದ್ಧಾರಕ್ಕೆ, ಒಳಿತಿಗೆ ಹೋರಾಡಿ ಸೋತ ಆಚಾರ್ಯರು ಹೊಳೆಯಲ್ಲಿ ಲೀನವಾಗುತ್ತಾರೆ. ಅವರು ನೀರಿನಲ್ಲಿ ತೇಲಿ ಹೋದಾಗ ಬುದ್ಧಿ ಭ್ರಮಣೆಯಾಗಿ ವೈಯಕ್ತಿಕ ಭಾವನೆಗಳೂ ಲಯವಾಗಿ ಹೋಗುವುದು ಅವರ ಪಾತ್ರದ ದೃಷ್ಟಿಯಿಂದ ಅರ್ಥಪೂರ್ಣವಾಗಿದೆ. ಭಾಗವತ ಪುರಾಣ ಮತ್ತು ಭಗವದ್ಗೀತೆಗಳ ಅರ್ಥವನ್ನು ಪ್ರತ್ಯಕ್ಷವಾಗಿ ಬಾಳಿನಲ್ಲಿ ಕಂಡು ಅನುಭವಿಸಿ ಕೊನೆಯಲ್ಲಿ ಆನಂದದಲ್ಲಿಯೇ ಲೀನವಾಗುತ್ತಾರೆ. ಬಾಳಾಚಾರ್ಯರ ಪಾತ್ರ ಕಾದಂಬರಿ ಲೋಕದ ಹೊರಗೆ ಜೀವಿಸುವುದೇ ಸಾಧ್ಯವಿಲ್ಲವೆನ್ನುವಷ್ಟರ ಮಟ್ಟಿಗೆ ಪಾದಳ್ಳಿಯ ನೆಲದಲ್ಲಿ ಬೇರು ಬಿಟ್ಟಿದೆ.

## ದಾದಾ

ಕಾದಂಬರಿಯಲ್ಲಿ ಬರುವ ಮುಖ್ಯ ಪಾತ್ರಗಳಲ್ಲಿ ದಾದಾನ ಪಾತ್ರವೂ ಒಂದು. ಈ ಪಾತ್ರದ ಬಗೆಗೆ ಲೇಖಕರಿಗೆ ವಿಶೇಷವಾದ ಒಲವು ಇದೆ. ಇದನ್ನು ಕಾದಂಬರಿಕಾರರು ಪ್ರಾರಂಭದಲ್ಲಿ ಹೀಗೆ ತಿಳಿಸಿದ್ದಾರೆ- " ಈ ಕಾದಂಬರಿಯನ್ನು ಬರೆದ ಇತಿಹಾಸವೂ ಸ್ವಾರಸ್ಯವಾಗಿದೆ. ದಾದಾ ಎಂಬ ಒಬ್ಬ ವ್ಯಕ್ತಿಯ ಸಾಹಸಮಯ ಜೀವನದ ಸುತ್ತಲೂ ಒಂದು ಕತೆ ಕಟ್ಟಬೇಕೆಂದು ನನ್ನ ಹಂಬಲವಿತ್ತು. ಆದರೆ ಬರೆಯುತ್ತ ಹೋದಂತೆ ಅದರ ರಚನೆಯೇ ಭಿನ್ನವಾಗುತ್ತ ನಡೆಯಿತು" ಎಂದು ಹೇಳಿದರೂ ಕೂಡ ಕಾದಂಬರಿಯುದ್ದಕ್ಕೂ ಆತನ ನೇರ, ಸರಳ ಹಾಗೂ ಸಾಹಸಗಳನ್ನು ಉದಾರವಾಗಿ ವಿವರಿಸುತ್ತ ಹೋಗುತ್ತದೆ. ಕಾದಂಬರಿಯ ಪ್ರಾರಂಭದಿಂದ ಕೊನೆಯವರೆಗೂ ಹಬ್ಬಿರುವ ಪಾತ್ರವೆಂದರೆ ದಾದಾ. ಇಡೀ ಪಾದಳ್ಳಿ ನಾಶವಾದ ಕೊನೆಯಲ್ಲಿ ಬದುಕಿ ಉಳಿಯುವ ಒಳ್ಳೆಯ ಶಕ್ತಿಯೆಂದರೆ ದಾದಾ.

ದಾದಾ ಶಿರೇದಾರ ಲಕ್ಷ್ಮಣನ ಮಗ. ಆತನ ಮೂಲ ಹೆಸರು ಭೀಮಸೇನ. ಹೆಸರಿಗೆ ತಕ್ಕಂತೆ ಕಟ್ಟುಮಸ್ತಾದ ದೇಹ. ಸಾಮರ್ಥ್ಯವುಳ್ಳವನು ಜೊತೆಗೆ ಮುಂಗೋಪ. ಹಠಮಾರಿ ಸ್ವಭಾವ. ಯಾರಿಗೂ ಹೆದರದ ದಿಟ್ಟತನ. ಅನ್ಯಾಯವನ್ನು ಪ್ರತಿಭಟಿಸುವ ಗುಣ, ಸ್ನೇಹಜೀವಿ, ಮಾನವೀಯ ಅಂತಃಕರಣವುಳ್ಳ ವ್ಯಕ್ತಿಯಾಗಿ ಕಾದಂಬರಿಯಲ್ಲಿ ಕಂಡುಬರುತ್ತಾನೆ. ದಾದಾನ ಸಾಹಸಗಳು ಕಾದಂಬರಿಯ ವಸ್ತುವಿಗೆ ಅವಶ್ಯಕವಿದ್ದರೂ ಆ ಸಾಹಸಗಳನ್ನು ನಿರೂಪಿಸುವಾಗ ಅವನ ವ್ಯಕ್ತಿತ್ವ, ಧೈರ್ಯ. ಸಾಹಸಗಳು ನಮ್ಮ ಮನಸ್ಸಿನಲ್ಲಿ ನಿಲ್ಲುವಂತೆ ಒತ್ತು ಕೊಟ್ಟು ಚಿತ್ರಿಸಿದ್ದಾರೆ.

ದಾದಾ ಎಂದೂ ಸೋಲರಿಯದ ಗರಡಿಯಾಳು. ಚಿಕ್ಕಂದಿನಲ್ಲಿಯೇ ನಾನಾ ಕಾಕಾನಿಂದ ಕುಸ್ತಿಯ ಪಟ್ಟು ಪೇಚುಗಳನ್ನು ಕಲಿತಿದ್ದ ಪಾದಳ್ಳಿಯ ತಾಲೀಮುಖಾನೆಯ ವೀರರೆಲ್ಲ ದಾದಾನೆದುರು ಮಣ್ಣು ಮುಕ್ಕಿದ್ದರು. "ದಾದಾ ಚಡ್ಡಿ ಏರಿಸುತ್ತಿರುವಾಗಲೇ ಲಾಮಾನ

ಗಡಿ ಎದ್ದನೆಂಬ ಗದ್ದಲ ಪ್ರೇಕ್ಷಕರಲ್ಲಿ ಎದ್ದಿತು. ದಾದಾ ನಿಂತಿರುವ ಕಡೆಗೆ ಎಲ್ಲರ ದೃಷ್ಟಿ ಹೊರಳಿತು. ಇನ್ನೂ ಹದಿನೆಂಟರ ಪ್ರಾಯ: ಎಣ್ಣೆಗೆಂಪಿನ ಮುಖದ ಮೇಲೆ ಎಳೆಮೀಸೆ ಕಂಡೂ ಕಾಣದಂತೆ ಮೂಡಿದ್ದವು. ಮುಖದಲ್ಲಿ, ಕಣ್ಣುಗಳ ಚಂಚಲತೆಯಲ್ಲಿ, ತುಟಿಗಳ ಮುಗುಳು ನಗೆಯಲ್ಲಿ ಇನ್ನೂ ಹಸುಗೂಸಿನ ಮುಗ್ಧತೆಯಿತ್ತು. ಆದರೆ ದೇಹವೋ ನದಿಯ ದಂಡೆಯ ಮೇಲಿನ ಆಲದ ಮರದಂತೆ ಬೀಸಾಗಿ ಬೆಳೆದಿತ್ತು. ಹೆಜ್ಜೆಯೂರಿದರೆ ನೆಲ ನಡುಗುವಂತಾಗಬೇಕು. ದೇಹ ಸ್ಥೂಲವಾಗಿರಲಿಲ್ಲ; ಸ್ವಚ್ಛಂದವಾಗಿ ಬೆಳೆದ ಬಿದಿರಿನಂತೆ 'ಸುಬಕಾ'ಗಿತ್ತು". ಈ ವರ್ಣನೆ ದಾದಾನ ಚಿತ್ರವನ್ನು ಶಕ್ತವತ್ತಾಗಿ ನಮ್ಮ ಕಣ್ಮುಂದೆ ನಿಲ್ಲಿಸುತ್ತದೆ. ಎಳ್ಳಮಾಸೆಯ ಮುನ್ನಾ ದಿನ ಜತ್ತಿಯಲ್ಲಿ ನಡೆದ ಕುಸ್ತಿಯಲ್ಲಿ ಪಂಜಾಬದ ಪೈಲವಾನ ಲಾಮ ದಾದಾನ ಪ್ರತಿಸ್ಪರ್ಧಿಯಾಗಿದ್ದ "ಲಾಮ ಬೆಟ್ಟದಂತೆ ಸ್ಥೂಲಕಾಯದ ಆಳು ದಾದಾ ಹಾಗೂ ಲಾಮಾ ಎದುರುಬದುರಾಗಿ ನಿಂತಾಗ ದಾದಾನಂಥ ಪುಡಿಯಾಳು ಲಾಮಾನನ್ನು ಗೆಲ್ಲುವುದು ಅಸಾಧ್ಯವೆಂದೇ ಎಲ್ಲರ ಮನವರಿಕೆಯಾಗಿತ್ತು. ಆದರೆ ದಾದಾನ ಕೈಚಳಕದ ಪರಿಚಯವಿದ್ದವರು ಮಾತ್ರ ಈ ಸಮನಾದ ಜೋಡಿಯಲ್ಲಿ ನೋಡಿ ನಿರ್ಣಯದ ಬಗ್ಗೆ ಕಾತರರಾಗಿದ್ದರು. ಕುಸ್ತಿಯ ಕಣದಲ್ಲಿ ದಾದಾ ಮಿಂಚು ಸುಳಿದಂತೆ ಲಾಮಾ ಬರುತ್ತಿದ್ದ ಕಡೆಗೆ ಹಾರಿದನು. ಕಣದ ಮಣ್ಣನ್ನು ಕೈಮೈಗಳಿಗೆ ಸವರಿಕೊಂಡು ಕುಸ್ತಿಯ ಸಂಪ್ರದಾಯದಂತೆ ಲಾಮಾನ ಕೈಬಗ್ಗಿ ಜೋಲಿ ಹೊಡೆದು ಸಲಾಮಕೊಟ್ಟನು. ಕೈಹಿಡಿದಾಗ ಮಾತ್ರ ಲಾಮಾನಿಗೆ ತಾನು ಅಸಮಬಲ ವೀರನೊಬ್ಬನನ್ನು ಎದುರಿಸುತ್ತಿರುವೆನೆಂಬುದರ ಅರಿವಾಯಿತು. ಯಾವಾಗಲೂ ರೇಶಿಮೆಯಂತೆ ಮೃದುವಾಗಿರುತ್ತಿದ್ದ ದಾದಾನ ಮೈ ಈಗ ಉಕ್ಕಿನಂತೆ ಕಠಿಣವಾಗಿತ್ತು. ಕೈಹಿಡಿದು ನೆಲಕ್ಕೆ ಒಗೆಯುವೆನೆಂಬ ಲಾಮಾನ ಆತ್ಮವಿಶ್ವಾಸ ಮಾಯವಾಯಿತು. ಎಚ್ಚರದಿಂದಲೇ ಕೈಗೆ ಕೈಕೊಡುತ್ತ ಕುಸ್ತಿಗಾರಂಭವಾಯಿತು"

ದಾದಾನ ಕುಸ್ತಿ ವ್ಯರ್ಥಶ್ರಮದಲ್ಲ. ಯಾವುದಾದರೂ ಅಪೂರ್ವವಾದ ಪೇಚನ್ನು ಹಾಕಿ. ಶತ್ರುವನ್ನು ಹಣ್ಣು ಮಾಡಿ ಸೋಲಿಸುವುದು ಅವನ ವೈಶಿಷ್ಟ್ಯವಾಗಿತ್ತು. "......ಲಾಮಾನ ಎರಡು ಕಾಲುಗಳ ಮಧ್ಯೆ ದಾದಾ ಉಸಿರುಗಟ್ಟಿ ಶರಣಾಗತನಾಗುವೆನೆಂಬ ಬಿಂಕದಿಂದ ಲಾಮಾ ತನ್ನ ಹಿಡಿತವನ್ನು ಬಿಗಿಪಡಿಸಿ. ಸುತ್ತಲೂ ನೋಡಿ ನಗೆ ಬೀರಿದ. ಆದರೆ ದಾದಾಗೆ ಇದೇನೂ ಅನಿರೀಕ್ಷಿತವಾಗಿರಲಿಲ್ಲ. ನುರಿತ ಈಜುಗಾರ ನೀರಲ್ಲಿ ಮುಳುಗಿದಂತೆ ಒಂದು ನಿಮಿಷ ಸ್ವಸ್ಥವಾಗಿ ಕುಳಿತಲ್ಲಿಯೇ ಕುಳಿತು. ಒಮ್ಮೆಲೇ ತನ್ನ ಕೈಗಳೆರಡನ್ನೂ ಲಾಮಾನ ತೊಡೆಗಳಿಂದ ಹೊರತೆಗೆದು ಅವನ ಎರಡು ಕೈಗಳು ತನ್ನ ತಕ್ಕೆಯಲ್ಲಿ ಬರುವಂತೆ ತೆಕ್ಕೆ ಹಾಯ್ದದ್ದೆ ತಡ ಅವನ ಕಾಲುಗಳು ಮುಕ್ತವಾದವು. ಕ್ಷಣದಲ್ಲಿ ದಾದಾ ತಲೆಯನ್ನು ನೆಲಕ್ಕೂರಿ ನಿಂತುಬಿಟ್ಟನು. ಲಾಮಾನ ದೇಹ ದೊಪ್ಪನೆ ನೆಲಕ್ಕೆ ಅಂಗಾತ

ಅಪ್ಪಳಿಸಿತು. ದಾದಾ ಸದ್ದು ಹೊಡೆದು ಅಳ್ಳಾಗಿ ನಿಂತು. ಎರಡೂ ಕೈ ಮೇಲಕ್ಕೆತ್ತಿ ತಾನು ಗದ್ದೆನೆಂದು ಹಾರಿ ತನ್ನ ಸ್ಥಳದತ್ತ ಸಾಗಿದನು." – ಈ ವರ್ಣನೆ ದಾದಾನ ಕುಸ್ತಿಯಲ್ಲಿನ ಚಾಣಾಕ್ಷತನ. ಸಾಹಸಗಳನ್ನು ಮತ್ತೆ ಮರೆಯಲಾಗದಂತೆ ಪರಿಚಯಿಸುತ್ತದೆ. ಇಂಥದೇ ಮತ್ತೊಂದು ಪ್ರಸಂಗ ದಾದಾ ಪಾದಕ್ಷೆಯನ್ನು ಬಿಟ್ಟು ರಾಮಪುರಕ್ಕೆ ಹೋದ ಕೆಲ ದಿನಗಳಲ್ಲಿ ಮಹಾರಾಜರೆದುರು ನಡೆದ ಕುಸ್ತಿಯಲ್ಲಿ ಪಂಜಾಬಿನ ಗುಲಾಬನೆಂಬ ಪೈಲವಾನನ್ನು ಸೋಲಿಸಿ ಗರಡಿ ಮನೆಯ ಉಸ್ತಾದ ಪಟ್ಟವನ್ನು ಪಡೆದುಕೊಳ್ಳುತ್ತಾನೆ.

ದಾದಾ ಯಶವಂತರಾಯರ ಮನೆಯಲ್ಲಿದ್ದಾಗ ಕಂಡ ಕನಸು ಮುಂದೆ ತಾನು ಕೇಳಲಿರುವ ಅಘಾತಸುದ್ದಿಯ ಸೂಚನೆಯಾಗಿದೆ. ಕಣ್ಣಿಂದಬಿದ್ದರೂ ಕರುಳಿಂಯದೆ ಎಂಬ ಮಾತು ಇಲ್ಲಿ ಸತ್ಯವಾಗಿದೆ. ತನ್ನ ತಂದೆಗಿಂತಲೂ ಹೆಚ್ಚು ಆತ್ಮೀಯರು. ಗರಡಿಯ ಗುರುಗಳೂ ಆಗಿದ್ದಂತಹ ಚಿಕ್ಕಪ್ಪ ನಾನಾಕಾಕನ ಸಾವು ದಾದಾನಿಗೆ ಬರಸಿಡಿಲೆರಗಿದಂತಾಗುತ್ತದೆ. ನಾನಾಕಾಕನ ಸಾವಿಗೆ ಕಾರಣವೇನಿರಬಹುದೆಂಬ ಗೊಂದಲದಲ್ಲಿದ್ದ ಈತನಿಗೆ ಯಶವಂತರಾಯರಿಂದ ಸತ್ಯ ಮನವರಿಕೆಯಾಗುತ್ತದೆ. ನಾನಾನ ಸಾವಿಗೆ ಚಿಮಣಾಳ ಮೇಲಿನ ಅತ್ಯಾಚಾರವೇ ಕಾರಣವೆಂದರಿತ ದಾದಾ ಈ ಕೃತ್ಯವನ್ನೆಸಗಿದವನು ಬಾಪುಸಾಹೇಬನೆಂದು ತಿಳಿದು ಆತನನ್ನು ಕೊಲ್ಲಲು ಮುಂದಾಗುತ್ತಾನೆ. "ಕೊಲಿ ಮಾಡಿದವನ ತಲಿ ಹೊಡೀಲಾಕ, ತಂದಲ್ಲದ ಹೆಣ್ಣಿನ್ನ ಮುಟ್ಟಿದ ಕೈ ಕತ್ತರಸಾಕ. ಹೀಂಗಲ್ಲದ ಇನ್ಯಾಂಗ ಹೋಗುದು?" ಎಂದು ರಭಸದಿಂದ ಕೋಪೋದ್ರಿಕ್ತನಾಗಿ ಮಠಕ್ಕೆ ಧಾವಿಸುತ್ತಾನೆ. ಅಷ್ಟರಲ್ಲಿ ಅಲ್ಲಿಗೆ ಧಾವಿಸಿದ ಬಾಪುವಿನ ಹೆಂಡತಿ ರತ್ನಾಳ ಕಣ್ಣೀರು ದಾದಾನ ಕೋಪವನ್ನೆಲ್ಲ ಒಮ್ಮೆಲೆ ಇಳಿಸುತ್ತದೆ. ರತ್ನಾಳ ಸಂಸಾರ ಅಗಡ ಮಾಡೂದಿಲ್ಲ ಅಂತ ಆಣೀ ಮಾಡು ದಾದಾ ಎಂಬ ಯಶವಂತರಾಯರು ತೆಗೆದುಕೊಂಡ ಭಾಷೆ ತಡೆಯುತ್ತದೆ. ನಂತರ ಚಿಮಣಾಳು ತನ್ನ ಈ ಸ್ಥಿತಿಗೆ ಕಾರಣನಾದವನು ಬಾಪೂ ಸಾಹೇಬ ಅಲ್ಲ ಸನ್ಯಾಸಿಯಾದ ಪವಡಪ್ಪ ಎಂಬ ಸತ್ಯಸಂಗತಿ ಕೇಳಿದ ದಾದಾನಿಗೆ ಸಿಡಿಲು ಬಡಿದಂತಾಗುತ್ತದೆ. ಸ್ವಲ್ಪ ಹೊತ್ತು ಯೋಚಿಸಿದ ದಾದಾ ಪ್ರಿಯಕರನಾದವನು ಹೆಣ್ಣನ್ನು ಲಗ್ನವಾಗಿ ಸಾಕಲೇಬೇಕೆಂಬುದು ಅವನು ನಂಬಿದ ನೀತಿಯಗಿತ್ತು. ಅವನು ಸನ್ಯಾಸಿಯಾದರೂ ಅಷ್ಟೇ ಗೃಹಸ್ಥನಾದರೂ ಅಷ್ಟೆ. ಏನೇ ಆದರು ತನ್ನ ತಂಗಿಯ ಬದುಕು ಮಾನಗೆಡಬಾರದು ಎಂದು ಆಕೆಯನ್ನು ಮಠದಲ್ಲಿ ಪವಡಯ್ಯನವರ ಆಶ್ರಯದಲ್ಲಿಯೇ ಬಿಡಲು ನಿರ್ಧರಿಸುತ್ತಾನೆ. ಚಿಮಣಾಳ ಬಗೆಗೆ ಅಣ್ಣನಾದ ದಾದಾನಲ್ಲಿ ಪ್ರೀತಿ, ಅನುಕಂಪವಿದೆಯೇ ಹೊರತು ಹಾಳಾದ ಆಕೆಯ ಬದುಕನ್ನು ಸರಿಪಡಿಸುವಲ್ಲಿ ಗಂಭೀರವಾದ ಪ್ರಯತ್ನ ಮಾಡುವುದಿಲ್ಲ. ಆಕೆಯನ್ನು ಮಠದಲ್ಲಿ ತಂದು ಬಿಟ್ಟಾಕ್ಷಣ ಅವಳಿಗಾದ ಅನ್ಯಾಯವನ್ನು ಸರಿಪಡಿಸಿದಂತಾಗುವುದಿಲ್ಲ. ಇಲ್ಲಿ ದಾದಾನ ಮುಡುಕು ಸ್ವಭಾವವೇ ಎದ್ದು ಕಾಣುತ್ತದೆ. ಇದಾದ ತರುವಾಯ ತನ್ನ ಕೃತಿಯ ಬಗ್ಗೆ

ತಾನೆ ಯೋಚಿಸುತ್ತಾನೆ. ಆತನ ಮನಸ್ಸು ಪಶ್ಚಾತ್ತಾಪದಿಂದ ಬೇಯುತ್ತದೆ. ಪಾಪಿಗೆ ತಕ್ಕ ಪ್ರಾಯಶ್ಚಿತ್ತವಾಗಬೇಕೆಂಬ ತತ್ತ್ವದಲ್ಲಿ ನಂಬಿಕೆ ಇಟ್ಟವನು. ಆದರೆ ತಾನು “ಪಾಪ ಮಾಡಿದವನಿಗೆ ಶಿಕ್ಷೆ ವಿಧಿಸದೆ ಅನ್ಯಾಯವಾಗಿ ಚಿಮಣಾಳನ್ನು ಪಡದಯ್ಯನ ಪಾಲಿಗೆ ಒಪ್ಪಿಸುವುದು ಮರ್ಯಾದೆಗೇಡಲ್ಲದೆ ಮತ್ತೇನು?. ಚಿಮಣಾಳ ಮುಂದಿನ ಜೀವನ ಸುಗಮವಾಗಬಹುದೇ? ಪಡದಯ್ಯ ಹೇಳಿ ಕೇಳಿ ಘಟಿಂಗ ದಾನವ್ವನಂತೆಯೇ ಚಿಮಣಾಳನ್ನು ಹೊರದೂಡಿದರೆ ಗತಿಯೇನು? ಅಭಿಮಾನವಂತಳಾದ ಚಿಮಣಾ ಮುಂದೆ ನಾನಾ ಕಾಕನ ಹಾದಿಯನ್ನಿಡಿದರೆ ನಾನೇ ಆಕೆಯನ್ನು ಕೈಯಾರ ಕೊಂದಂತಾಗುವುದಿಲ್ಲವೇ?” ಹೀಗೆ ಹಲವು ರೀತಿ ಚಿಂತಿಸಿ ಆಕೆಯ ಭವಿಷ್ಯದ ಬಗೆಗೆ ಕಳವಳ ವ್ಯಕ್ತಪಡಿಸುತ್ತಾನೆ ಅಷ್ಟೆ.

ತಪ್ಪು ಮಾಡದ ವ್ಯಕ್ತಿ ಯಾರಿಗೂ ಹೆದರಬೇಕಿಲ್ಲ ಎಂಬ ನಿಲುವು ದಾದಾನದು. ಪಡದಯ್ಯ ತನ್ನ ಮೇಲೆ ದೂರು ನೀಡಿರುವುದು. ಫಕರುದ್ದೀನ ಫೌಜದಾರರು ತನ್ನನ್ನು ವಿಚಾರಣೆ ಮಾಡಲು ಬರುತ್ತಿದ್ದಾರೆಂಬ ಸಂಗತಿ ತಿಳಿದರೂ ಕೂಡ ಸ್ವಲ್ಪವೂ ವಿಚಲಿತನಾಗುವುದಿಲ್ಲ. ಬಡವರನ್ನು ಶೋಷಿಸುವ ಫೌಜದಾರನಿಗೆ ತಕ್ಕ ಪಾಠ ಕಲಿಸಬೇಕೆಂದು ನಿರ್ಣಯಿಸುತ್ತಾನೆ. ಅದೇ ಸಂದರ್ಭದಲ್ಲಿ ಗೌಡರನ್ನು ಅಪಮಾನಗೊಳಿಸಿ ಅವರ ಮೇಲೆ ಕೈ ಮಾಡಲು ಮುಂದಾದಾಗ ಅಲ್ಲೇ ಇದ್ದ ದಾದಾ ಪೌದುದಾರರ ಮೇಲೆರಗಿ ಅವರನ್ನು ಹೆದರಿಸಿ ಗೌಡರನ್ನು ಪಾರು ಮಾಡುತ್ತಾನೆ. ಇದಲ್ಲದೆ ಗೌಡರ ಹೊಲವನ್ನು ಪಡದಯ್ಯನ ಕಡೆಯವರು ಲೂಟಿ ಮಾಡುವುದಕ್ಕೆ ಬಂದ ಸಂದರ್ಭ. ಬೇಟೆಯ ಸಂದರ್ಭ. ಹೋಳಿಹುಣ್ಣಿಮೆ, ಕಾರಹುಣ್ಣಿಮೆ ಮೊದಲಾದ ಪ್ರಸಂಗಗಳಲ್ಲಿ ದಾದಾನ ಸಾಹಸವನ್ನು, ಜಾಣಾಕ್ಷತನವನ್ನು ತಿಳಿಸುವುದರ ಜೊತೆಗೆ ಕಾದಂಬರಿಯ ಬೆಳವಣಿಗೆಯಲ್ಲಿ ಬಹುಮುಖ್ಯವಾದ ಘಟ್ಟಗಳಾಗಿವೆ.

ದಾದಾನ ಬಗೆಗೆ ಲೇಖಕರಿಗೆ ವಿಶೇಷವಾದ ಕಾಳಜಿ. ಪ್ರೀತಿ ಇದೆ. ಅವನ ಸಾಹಸಗಳು ಕಾದಂಬರಿಯುದ್ದಕ್ಕೂ ತುಂಬಿವೆ. ಪಡದಯ್ಯ ಕೆಡುಕಿಗೆ ಸಂಕೇತವಾದರೆ. ದಾದಾ ಒಳಿತಿಗೆ ಸಂಕೇತವಾಗಿದ್ದಾನೆ. ಕೆಲವೊಮ್ಮೆ ದಾದಾನ ಪಾತ್ರವನ್ನು ವೈಭವೀಕರಿಸಿದ್ದಾರೇನೋ ಎಂದೆನಿಸುತ್ತದೆ. ಏಕೆಂದರೆ ಅಸಾಧ್ಯವನ್ನು ಸಾಧಿಸುವ ಹುಂಬತನ. ಕಳಂಕರಹಿತತೆ. ಧೈರ್ಯ. ಸಾಹಸಗಳು ಅವನನ್ನು ಇತರರಿಂದ ಭಿನ್ನವಾಗುವಂತೆ ಮಾಡಿದೆ. ನಾನಾನ ಕೊಲೆಯ ಸಂದರ್ಭದಲ್ಲಿ ವಿವೇಕಿಗಳಾದ ಬಾಳಾಚಾರ್ಯರಾದಿಯಾಗಿ ಎಲ್ಲಾ ಮುಖಂಡರೂ ಕೊಲೆಯಂಥ ಅನ್ಯಾಯವನ್ನು ಮುಚ್ಚಿಡುತ್ತಾರೆ. ಈ ಸಂದರ್ಭದಲ್ಲಿ ಲೇಖಕರು ದಾದಾನನ್ನು ಅಭಿಮಾನ ಪೂರ್ವಕವಾಗಿ ರಕ್ಷಿಸುತ್ತಾರೆ. ಅಲ್ಲದೆ ಕಾದಂಬರಿಯಲ್ಲಿ ಬರುವ ಬಹುಪಾಲು ಪಾತ್ರಗಳೆಲ್ಲವೂ ದಾದಾನ ಸಾಹಸ ಗುಣಗಳನ್ನು ಶ್ಲಾಘಿಸುತ್ತವೆ. “ಪ್ರೀತಿಯಿದ್ದರೆ ಪಕ್ಕೆಯಲ್ಲಿಟ್ಟು ಸಾಕುವ ಅಣ್ಣ”. “ದಾದಾ ಉದ್ಧಟನಿರಬಹುದು:

ಅವಿನಯದಿಂದ ವರ್ತಿಸಿರಬಹುದು; ಪಡದಯ್ಯನ ಮೇಲೆ ಬಿದ್ದುಹೋಗಿರಬಹುದು. ಆದರೆ ಹುಡುಗ ಇನ್ನೂ ಚಿಕ್ಕವನು; ಬಿಸಿ ನೆತ್ತರ ತಣ್ಣಗಾಗಿಲ್ಲ; ಹಂಗಿಗಾದ ಅಪಮಾನ ಅವನ ತಲೆ ತಿರುಗಿಸಿದೆ. ದಾದಾನ ತಪ್ಪುಗಳೆಲ್ಲ ಸಣ್ಣವು...". ಆತನನ್ನು ದಯವಿಟ್ಟು ಕ್ಷಮಿಸಿ ಎಂದು ಫೌಜುದಾರರಿಗೆ ಹೇಳುವ ಗೌಡರು. ಗೌಡರ ಹೊಲದ ಲೂಟಿ ತಪ್ಪಿಸಿದ ಸಂದರ್ಭದಲ್ಲಿ ಬಾಳಾಚಾರ್ಯರು "ದುಷ್ಟಶಕ್ತಿಗಳ ಈ ಸಂಕ್ರಮಣ ಕಾಲದಲ್ಲಿ ದಾದಾ ಒಬ್ಬನೇ ಆಸೆಯ ಕಿರಣವಾಗಿ ಕಂಡ ಅವನ ಧೈರ್ಯ, ಸಾಹಸಗಳು, ಮುಳುಗಬಹುದಾದ ಪುಣ್ಯವನ್ನು ರಕ್ಷಿಸಬಹುದೆಂದು ಅವರಿಗೆ ತೋರಿತು" ಎನ್ನುತ್ತಾರೆ. ಪೇಟೆಯಲ್ಲಿ ಗೆದ್ದು ಬಹುಮಾನ ಗಳಿಸಿದ "ದಾದಾ ಸಾಮಾನ್ಯ ಹುಡುಗ ಅಲ್ಲ ತಗೋ....ಎಂಟು ಜನಾ ಹಾವನೂರವರು. ಮತ್ತಾನಂತವರು ಬಂದರ ಆಸಗೊಳ್ಳಲಿಲ್ಲಂ ಅಂದಾ. ಏನು ಹೊಡಿಯಾಣರೀ ಅದು- ಈಟೊತ್ತಿಗೆ ಅಂದರ ಅವರೊಳಗೆ ಒಬ್ಬಾವನರೆ ಸತ್ತಿರಬೇಕು ನೋಡ್ರಿ" - ಎಂದು ತಳವಾರ ಮಲ್ಲ ಮುಕ್ತ ಕಂಠದಿಂದ ಹೊಗಳುತ್ತಾನೆ. "ಊರು ಕಾಯೋ ಹುಡುಗನ್ನ ಕಣ್ಣ್ರಿ ಮಾಡಲಾರ ಹಂಚಿಕೆ ಹಾಕವ್ರು ಮುಡಸಗೊಳು....ಏನಾದರಾಗಲಿ ದಾದಾ ಜೇಲು ಕಾಣುವ ಪ್ರಸಂಗ ಬರದಿರಲಿ ಶಿವನೇ" ಎಂದು ಪ್ರಾರ್ಥಿಸಿದ ಪಾರ್ವತವ್ವ. ಕರಿಹರದ ಎತ್ತುಗಳನ್ನು ದಾದಾ ಹಾಡೆಗೆ ಮುಟ್ಟಿಸಿದ ಸಂದರ್ಭದಲ್ಲಿ "ಇದೇ ರೀತಿ ಪಾದಕ್ಕಿಯ ಮಾನ ರಕ್ಷಣೆಯೊಳಗೆ ನಿನ್ನ ಪ್ರಯತ್ನ ಕಡಿಮ್ಯಾಗಬಾರದು ನೋಡುದಾದಾ" ಎಂದು ಉತ್ಸಾಹ ತುಂಬಿದ್ದು. ವಿಪತ್ತಿನಿಂದ ಮಹಾರಾಜರನ್ನು ಪಾರು ಮಾಡಿದಾಗ ಅವರು ದಾದಾನನ್ನು "ಪಾದಕ್ಕಿಯ ರತ್ನ"ಎಂದು ಮೆಚ್ಚುಗೆ ವ್ಯಕ್ತಪಡಿಸುತ್ತಾರೆ. ಇಷ್ಟೇ ಅಲ್ಲ ದಾದಾನನ್ನು ತನ್ನ ಶತ್ರುವೆಂದೇ ಭಾವಿಸಿದ್ದ ಪಡಪಪ್ಪ ಕೂಡ -"ದಾದಾ ಮಾರಾಜರ ಗರಡಿ ಮನ್ಯಾಗ ಉಸ್ತಾದ ಆಗ್ಯಾನಂತರಲೇ- ಪಾದಳ್ಳಿ ಹುಡುಗ ನಾಕ ಮಂದಿಗೆ ಅನ್ನಹಾಕಿ ಅವರ್ನ ತರಬೇತ ಮಾಡೂ ತಾಕತ ಪಡದಾನ" ಎಂದು ಹೊಗಳುತ್ತಾರೆ- ಹೀಗೆ ತಳವಾರ ಮಲ್ಲನಿಂದ ಮಹಾರಾಜರವರೆಗೆ ಎಲ್ಲರ ಬಾಯಲ್ಲೂ ದಾದಾನ ಮೆಚ್ಚುಗೆ, ಹೊಗಳಿಕೆ ಕಂಡುಬರುತ್ತದೆ.

"ದಾದಾನ ಬಗ್ಗೆ ರಾವಬಹದ್ದೂರರಿಗಿರುವ ಈ ಪರಿಯ ಅಭಿಮಾನಕ್ಕೆ ಕಾರಣವಾದರೂ ಏನು ಎಂದು ವಿಚಾರಿಸುವುದು ಅಗತ್ಯವಾಗಿದೆ. ಸ್ವಾರ್ಥ, ದುಷ್ಟತನ, ದೌರ್ಬಲ್ಯಗಳ ತಾಕಲಾಟದಲ್ಲಿಯೇ ಗ್ರಾಮಾಯಣದ ವಸ್ತು ಹುಟ್ಟಿಕೊಳ್ಳುವುದಾದರೂ ಇಲ್ಲಿ ಶ್ರದ್ಧಾತ್ಮಕ ಅಂಶಗಳಿಗೇನೂ ಕೊರತೆಯಿಲ್ಲ. ಬಾಳಾಚಾರ್ಯರ ವಿವೇಕ, ಶಂಕರಪ್ಪನ ಕ್ಷಾತ್ರ, ಪಾರೋತವ್ವನ ಅಭಿಮಾನ, ಶೇಷಪ್ಪನ ಬುದ್ಧಿಶಕ್ತಿ, ಯಶವಂತರಾಯನ ದಯಾಳುತನ, ಶಿವಲಿಂಗ ಸ್ವಾಮಿಯ ಶೀಲ ಇಂಥ ಅನೇಕ ಧನಮೌಲ್ಯಗಳನ್ನು ನಾವಿಲ್ಲಿ ಕಾಣುತ್ತೇವೆ. ಆದರೆ ಪಾದಕ್ಕಿಯ ದುರಂತ ಜೀವನದ ಪ್ರವಾಹದಲ್ಲಿ ಇವೆಲ್ಲ ನಿರ್ನಾಮವಾಗುತ್ತವೆ.

ಕೆಲವಂತೂ ವಿನಾಶಕ್ಕೆ ಕಾರಣವಾಗುತ್ತವೆ. ಈ ಹಿನ್ನೆಲೆಯಲ್ಲಿ ದಾದಾನ ವ್ಯಕ್ತಿತ್ವದಲ್ಲಿ ರಾವಬಹದ್ದೂರರು ರೂಪಿಸುವ ಸಂಕೇತವಾದರೂ ಏನು? ಅವನ ಮೂಲಕ ಅವರು ದೈಹಿಕ ಶಕ್ತಿ ಭಾವುಕತೆಯ ಮೌಲ್ಯಗಳನ್ನು ಪ್ರಸ್ತಾಪಿಸಲು ಉದ್ದೇಶಿಸಿರುವರೋ ಹೇಗೆ? ಇದಕ್ಕೆ ನಿಶ್ಚಿತವಾದ ಉತ್ತರ ಗ್ರಾಮಾಯಣದಲ್ಲಿ ಸಿಗುವುದಿಲ್ಲ. ಸಣ್ಣಪುಟ್ಟ ಅನ್ಯಾಯಗಳ ವಿರುದ್ಧ ಹೋರಾಡುವುದರಲ್ಲಿ ಶಕ್ತಿಯನ್ನು ವಿನಿಯೋಗಿಸುವ ದಾದಾ ಜಮೀನ್ದಾರಿಗಾದ ಅನ್ಯಾಯದ ಪರಿಮಾರ್ಜನೆಯನ್ನು ಮಾಡಲು ಗಂಭೀರವಾದ ಯಾವ ಪ್ರಯತ್ನವನ್ನು ಮಾಡುವುದಿಲ್ಲ.....ದಾದಾನ ಜೀವನ ಹೆಚ್ಚಾಗಿ ಪಶುಪಾಲನೆಯ ಮೇಲೆಯೇ ನಡೆದುಹೋಗುತ್ತದೆ. ಅವನಶಕ್ತಿ, ಸಂಪಿಗಸ್ಥನ ಪಶುಸಹಜ ಗುಣಗಳ ಹೊರತು ಹೆಚ್ಚಿನ ಮೌಲ್ಯಗಳನ್ನು ಪಡೆಯಲಾರವು. ಹೀಗಾಗಿ ದಾದಾನ ಬಗ್ಗೆ ನಮ್ಮಲ್ಲಿ ಅಭಿಮಾನ ಹುಟ್ಟಿಸುವ ಲೇಖಕರ ಪ್ರಯತ್ನ ಸಾರ್ಥಕವಾಗುವುದಿಲ್ಲ" ಎಂಬ ಮಾತು ನಿಜವೆನಿಸುತ್ತದೆ.

ಬಾಳಾಚಾರ್ಯರಲ್ಲಿನ ವಿವೇಕ ದಾದಾನಲ್ಲಿ ಕಾಣಲು ಸಾಧ್ಯವಿಲ್ಲದಿದ್ದರೂ ಕೂಡ ಅತ ಸ್ವಾಭಿಮಾನಿ. ಜಮೀನ್ದಾರ ಕೂಸಿನ ತಂದೆ ಬಾಪ್ಪು ಎಂದು ಹೇಳಿದರೆ ಅವನ ಹೆಸರನ್ನೇ ಹಚ್ಚುತ್ತೀನಿ ಎಂದ ಯಶವಂತರಾಯರ ಮಾತಿಗೆ ದಾದಾ ಒಪ್ಪದೆ ತಾವು ಎಂದೂ ನೀತಿಯನ್ನು ತಪ್ಪುವುದಿಲ್ಲವೆಂದು ಹೇಳುತ್ತಾನೆ. ಕಾದಂಬರಿಯಲ್ಲಿ ದಾದಾನ ಸಾಹಸ, ಧೈರ್ಯದ ಚಿತ್ರಣಕ್ಕಷ್ಟೇ ಸೀಮಿತರಾಗದೆ ಆತನ ಮಾನವೀಯತೆಯ ಗುಣ, ಅಂತಃಕರಣವನ್ನು ಚಿತ್ರಿಸುತ್ತದೆ. ನಾನಾಕಾಕನ ಸಾವು, ಗೌಡರ ಸಾವು, ಜಮೀನ್ದಾರ ಅತ್ಯಾಚಾರ ಈ ಸಂದರ್ಭದಲ್ಲೆಲ್ಲ ದಾದಾ ಎಳೆಯ ಮಗುವಿನಂತೆ ಬಿಕ್ಕಿಬಿಕ್ಕಿ ಅಳುತ್ತಾನೆ. ಮಗನಿಗಿಂತಲೂ ಹೆಚ್ಚಾಗಿ ಪ್ರೀತಿಯಿಂದ ಕಾಣುತ್ತಿದ್ದ ಗೌಡತಿ ತಿರಸ್ಕರಿಸಿದಾಗಲಂತೂ ಆತನ ಅಳಲು, ಸಂಕಟವೆಲ್ಲ ಅಕುಳ ಮುಂದೆ ಕಣ್ಣೀರಧಾರೆಯಾಗಿ ಹರಿಯುತ್ತದೆ. ತಾನು ಹುಟ್ಟಿ ಬೆಳೆದ ಪಾದಕ್ಷೆಯನ್ನು ಬಿಟ್ಟು ಮಹಾರಾಜರೊಟ್ಟಿಗೆ ಹೋಗಬೇಕಾದಾಗ ಒಂದೆಡೆ ಹರ್ಷ, ಮತ್ತೊಂದಡೆ ಅಗಲಿಕೆಯ ನೋವು ಅವನನ್ನು ತೀವ್ರವಾಗಿ ಕಾಡುತ್ತದೆ. ಅವನ ದುಃಖ ಮಾತಿಗೂ ಮೀರಿ ಆಳವಾಗಿತ್ತು.

ಮಹಾರಾಜರ ಜೊತೆ ಇಂದುಪುರಕ್ಕೆ ಹೋದಂದಿನಿಂದ ಪಾದಕ್ಷೆಯ ಗುಣವೇ ಹರಿದಂತಾಗಿತ್ತು. ತಾನು ಹುಟ್ಟಿ ಬೆಳೆದು ಆಡಿದ ಪಾದಕ್ಷೆಯನ್ನು ನೋಡಬೇಕೆಂಬ ಆಸೆಯಿಂದ ಬಂದ ದಾದಾನಿಗೆ ಊರಿನ ಸ್ಮಶಾನ ಮೌನ ಸ್ವಾಗತಿಸುತ್ತದೆ. ದಾದಾನ ಮನೆ, ವಾಡೆ, ಆಚಾರ್ಯರ ಮನೆ, ಗೌಡರವಾಡೆ.....ಹೀಗೆ ಇಡೀ ಊರೇ ಮನುಷ್ಯರಿಲ್ಲದೆ ಬಿಕೋ ಎನ್ನುವಂತಿತ್ತು. ಕತ್ತಲೆ ಊರನ್ನು ತಬ್ಬಿಕೊಂಡಿತು. ಪಾದಕ್ಷೆಯ ದುರ್ದೆಸೆಯ ಸ್ಥಿತಿಯನ್ನು ಕಂಡ ದಾದಾ 'ಪಾದಕ್ಷೆ ಶಾಪಗ್ರಸ್ತವಾಗಿರಬೇಕು....ಜನರು ಸತ್ತಿರಲಿಕ್ಕಿಲ್ಲ ಕೇವಲ ತನ್ನ ಕಣ್ಣಿಗೆ ಕಾಣದಾಗಿರಬೇಕು' ಎಂದುಕೊಳ್ಳುತ್ತ ನಿದ್ದೆ ಹೋಗುತ್ತಾನೆ. ದಾದಾ ಕನಸಿನಲ್ಲಿ

ಕಂಡ ಚಿತ್ರಣದಲ್ಲಿ ಪಾದಳ್ಳಿಯ ನಿರ್ಜನತೆಗೆ ಕಾರಣವಾದ ಅಂಶಗಳನ್ನು ಲೇಖಕರು ವಿವರಿಸಿದ್ದಾರೆ. ಅಂದರೆ ಆತನ ಕಣ್ಣಿಗೆ ಕಾಣದ ಸತ್ಯ ಆತನ ಸುಪ್ತ ಮನಸ್ಸಿಗೆ ಗೋಚರವಾಗಿರುತ್ತದೆ. ಕೊನೆಗೆ ತಾನು ಕಂಡ ಕನಸು ನಿಜವಾಗಿರುವ ಸಂಗತಿ ಕಮತಿಗರ ಕರಿಯಪ್ಪನಿಂದ ತಿಳಿದಾಗಲಂತೂ ಆತನಿಗೆ ಆಘಾತವಾಗುತ್ತದೆ. ಸತ್ವಪೂರ್ಣವಾಗಿ ಸಂಮೃದ್ಧವಾಗಿ ಬೆಳೆದಿದ್ದ ಬಾಳು ಕ್ಷಣದಲ್ಲಿ ನಿರ್ನಾಮವಾಗುವುದಕ್ಕೆ ಕಾರಣವಾದ ಅಂಶಗಳನ್ನು ತಿಳಿದು ಜೀವಹೋದ ದೇಹದಂತೆ. ಪುನರುಜ್ಜೀವನದ ಆಸೆಯಿಲ್ಲದೆ ಬಿದ್ದಂತಿದ್ದ ಊರನ್ನು ಕಂಡು ಮಮ್ಮಲ ಮರುಗುತ್ತಾನೆ. ಕಾದಂಬರಿ ಯುದ್ದಕ್ಕೂ ಕೆಡುಕಿನ. ದುಷ್ಟಶಕ್ತಿಯ ವಿರುದ್ಧ ಹುಂಬತನದಿಂದಲೇ ಹೋರಾಡಿದ ದಾದಾ ಊರಿನ ದುಸ್ಥಿತಿ ಕಂಡು ಕಂಬನಿ ಮಿಡಿಯುತ್ತಾನೆ.

ಕಾದಂಬರಿಯ ಕೊನೆಯಲ್ಲಿ ದಾದಾನ ಆಗಮನ ಪಾದಳ್ಳಿಯ ಭವಿಷ್ಯದ ಆಶಾಕಿರಣವಾಗಿದೆ. “ಕೊನೆಯಲ್ಲಿ ಬರುವ ಪ್ರಳಯದ ಚಿತ್ರವೇ ಕೊನೆಯಲ್ಲ. ಅದರಲ್ಲಿಯೂ ಬರಲಿರುವ ಮನ್ವಂತರದ ಬೀಜಗಳು ಅಡಗಿವೆ” ಎಂಬ ಕಾದಂಬರಿಕಾರರ ಆಶ್ವಾಸನೆ ನಿಜವೆನಿಸುತ್ತದೆ. ದಿಕ್ಕು ದಿಕ್ಕಿನಲ್ಲಿ ಚೆಲ್ಲಿ ಹೋದ ಪಾದಳ್ಳಿಯ ಸತ್ವ ತಿರುಗಿ ಬರುತ್ತದೆಂಬುದಕ್ಕೆ ಸಾಕ್ಷಿಯಾಗಿದೆ.

## ಪಡದಯ್ಯ

ಪಾದಳ್ಳಿಯ ಹಿರೇಮಠದ ಗುರುಪಾದಸ್ವಾಮಿಗಳ ನಂತರ ಬಂದ ಮಠಾಧಿಪತಿ. ಅಜರಾಣಿಯಿಂದ ಬಂದವನು ಕಾದಂಬರಿಯಲ್ಲಿ ಖಳನಾಯಕನಂತೆ ಚಿತ್ರಿತನಾಗಿದ್ದಾನೆ. ನೀತಿಯ ಕೇಂದ್ರವಾಗಬೇಕಿದ್ದ ಮಠವನ್ನು ಅನೀತಿಯ ಕೇಂದ್ರವನ್ನಾಗಿ ಕುಡುಕರ ಜೂಜುಕಟ್ಟೆಯಾಗಿ ಪರಿವರ್ತಿಸಿ ಮಠಕ್ಕಿದ್ದಂತಹ ಪಾವಿತ್ರ್ಯತೆಯನ್ನು ಹಾಳು ಮಾಡುತ್ತಾನೆ. ಮೇಲ್ನೋಟಕ್ಕೆ ಮಠಾಧಿಪತಿಯ ವೇಷವನ್ನು ಧರಿಸಿ ಅಂತರಂಗದಲ್ಲಿ ಅನೀತಿ. ಕಪಟ. ಕುತಂತ್ರ. ಕಾಮುಕತನದ ಮಡು. ಆಸೆಯಿಂದ ವಿಮುಖನಾದ. ಹೆಣ್ಣು. ಹೊನ್ನು. ಮಣ್ಣಿನ ಆಸೆಯನ್ನು ತ್ಯಜಿಸಿ ವಿರಕ್ತ ಜೀವನವನ್ನು ನಡೆಸುವವನು ಮಠಾಧಿಪತಿ ಎನಿಸಿಕೊಳ್ಳುತ್ತಾನೆ. ಆದರೆ ಇದಕ್ಕೆ ತದ್ವಿರುದ್ಧವಾದ ಗುಣ ಪಡದಯ್ಯನದು. ಹೆಸರೇ ಸೂಚಿಸುವಂತೆ ಮೇಲೆ ಹೇಳಿದ ಎಲ್ಲವನ್ನು 'ಬಿಟ್ಟವನ'ಲ್ಲ 'ಪಡೆದವನು'.

ಸಂಮೃದ್ಧತೆಯಿಂದ ಇದ್ದ ಪಾದಳ್ಳಿಯ ಸತ್ವ ಸಂಪೂರ್ಣವಾಗಿ ನಾಶವಾಗಲು ಮೂಲಕಾರಣ ಪಡದಯ್ಯ. ಪಾದಳ್ಳಿಯ ದುರಂತಕ್ಕೆ ಈತ ಮಾಡಿದ. ಮಾಡಿಸಿದ ಕೃತ್ಯಗಳು ಒಂದೇ ಎರಡೇ ? ಹಲವು. ಇವೆಲ್ಲವೂ ಒಟ್ಟಿಗೆ ಸೇರಿ ಪಾದಳ್ಳಿಯ ಸತ್ವವನ್ನೆಲ್ಲ ಹೀರಿ ಬಿಡುತ್ತವೆ. ಪಾದಳ್ಳಿಯ ಜೀವನ ಮೂರಾಬಟ್ಟೆಯಾಗಲು ಕಾರಣರಾದ ಅನಿಷ್ಟ ತ್ರಯರಲ್ಲಿ

ಈತ ಮೊದಲಿಗ (ಉಳಿದವರು ಬಾಪುಸಾಹೇಬ, ಲಿಂಗಪ್ಪ). ಪಾದಕ್ಕೆಯ ಅವನತಿಯ ದುರಂತ ನಾಟಕದ ಖಳನಾಯಕನೇನೋ ಎಂಬಂತೆ ಚಿತ್ರಿಸಿದ್ದಾರೆ. ಮಠಾಧಿಪತಿ ಎಂಬ ಜವಾಬ್ದಾರಿಯುತ, ಪವಿತ್ರವಾದ ಸ್ಥಾನದಲ್ಲಿದ್ದುಕೊಂಡೇ ಹಲವು ಅನಾಚಾರಗಳನ್ನು ಮಾಡುತ್ತಾನೆ. ಮಠದ ಸ್ವಾಮಿಯಾಗಿಯೂ ದುರಂತದಲ್ಲಿಯೇ ರುಚಿ ಕಾಣುವ ಸ್ವಭಾವ ಈತನದು.

ಪಡದಯ್ಯ ಅದ್ಭುತವಾದ ಕಾರ್ಯಸಾಮರ್ಥ್ಯವುಳ್ಳ ವ್ಯಕ್ತಿ ಚಾಣಾಕ್ಷ, ಚತುರ ಮಾತುಗಾರ. ಆದರೆ ಆ ಸಾಮರ್ಥ್ಯ ಸತ್ಕಾರ್ಯಕ್ಕೆ ವಿನಿಯೋಗವಾಗದೆ ದುಷ್ಕಾರ್ಯಗಳಿಗೆ ವಿನಿಯೋಗವಾಗಿ ಸರ್ವನಾಶಕ್ಕೆ ಕಾರಣವಾಗುತ್ತದೆ. ಗುರುಪಾದಸ್ವಾಮಿಗಳ ಅಕ್ಕನ ಮಗನಾದ ಈತ ಅಕ್ಷರಜ್ಞಾನ ತಿಳಿದವನು. ಹಿರಿಯಸ್ವಾಮಿಗಳ ಪರಂಪರೆಯನ್ನು ಕಾಯ್ದುಕೊಂಡು ಹೋಗುತ್ತಾರೆಂಬ ಊರವರ ನಂಬಿಕೆ ಹುಸಿಯಾಗುತ್ತದೆ. ಈತ ಮಠಕ್ಕೆ ಕಾಲಿಡುತ್ತಿದ್ದಂತೆ ಪುರಾಣ, ಭಜನೆ ಎಲ್ಲವೂ ನಿಂತುಹೋಗುತ್ತದೆ. ಅದರ ಬದಲಿಗೆ ಕುಡುಕರ, ಜೂಜುಕಟ್ಟೆಯಾಗಿ ಮಾರ್ಪಡುತ್ತದೆ. ಹಸಿದವರ, ಅನಾಥರ ಆಶ್ರಯ ತಾಣವಾಗುವುದು ಬಿಟ್ಟು ಕೆಲಸವಿಲ್ಲದ ಸೋಮಾರಿಗಳ ಆಶ್ರಯತಾಣವಾಗಿ ಮರ್ಯಾದೆವಂತರು ಕಾಲಿಡದ ಜಾಗವಾಗಿ ಮಾರ್ಪಾಟು ಹೊಂದಿತು. ಇದಷ್ಟೇ ಅಲ್ಲದೆ ವಿರಕ್ತನಾಗಿರಬೇಕಿದ್ದ ಪಡದಯ್ಯ ದಾನವ್ವ ಎಂಬ ಹೆಂಗಸನ್ನು ತನ್ನ ಪ್ರೇಯಸಿಯನ್ನಾಗಿ ಮಾಡಿಕೊಂಡು ಮಠದಲ್ಲೇ ತಂದಿರಿಸಿಕೊಳ್ಳುತ್ತಾನೆ. ಬಾಪುಸಾಹೇಬ ಇಷ್ಟಪಟ್ಟಿದ್ದ ಚಿಮಣಾಳನ್ನು ಮಠದಲ್ಲೇ ಹಾಳುಗೆಡವುತ್ತಾನೆ. ಈ ಘಟನೆ ಕೇವಲ ವಯಕ್ತಿಕ ಸಂಗತಿಯಾಗದೆ ಆ ಪಾಪದ ಹೊಣೆ ಇಡೀ ಊರಿನ ಮೇಲೆಯೇ ಬಿದ್ದಂತಾಗುತ್ತದೆ. ಆದರೆ ತಾನು ಯಾವ ತಪ್ಪನ್ನು ಮಾಡಿಲ್ಲವೆಂಬಂತೆ ಈ ಘಟನೆ ನಡೆದ ಮಾರನೇ ದಿನವೇ ಊರು ಬಿಟ್ಟು ಕೆಲ ತಿಂಗಲು ಅಸ್ತಂಗತನಾಗುತ್ತಾನೆ.

ಚಿಮಣಾಳ ಮೇಲೆ ನಡೆದ ಶೀಲಭಂಗ ಮುಂದೆ ನಾನಾ ಸಾವು ಪುತಳಾಬಾಯಿ ಸಾವು ಮೊದಲಾದ ದುರ್ಘಟನೆಗೆ ಕಾರಣವಾಗುತ್ತದೆ. ಇದಕ್ಕೆಲ್ಲ ಮೂಲ ಕಾರಣ ಪಡದಪ್ಪನೇ. ಬಾಪುಸಾಹೇಬ ಮತ್ತು ಲಿಂಗಣ್ಣ ಇಬ್ಬರೂ ಪಡದಪ್ಪನ ಕೈಯೊಳಗಿನ ಬೊಂಬೆಯಂತೆ ವರ್ತಿಸಿ ಊರಿನಲ್ಲಿ ಹಲವಾರು ಅನ್ಯಾಯ, ಅನಾಚಾರಗಳಿಗೆ ನಾಂದಿ ಹಾಡುತ್ತಾರೆ. ಬಡವರ ಹಸಿವನ್ನು ಕಂಡು ಕನಿಕರಗೊಳ್ಳುವ ಬದಲು ಅದನ್ನೂ ತನ್ನ ಸ್ವಾರ್ಥಕ್ಕೆ ಉಪಯೋಗಿಸಿಕೊಳ್ಳಲು ಹವಣಿಸುತ್ತಾನೆ. ಗೌಡರ ಹಗೆಗಳನ್ನು ಲೂಟಿ ಮಾಡಲು ಸಂಚು ರೂಪಿಸುತ್ತಾನೆ. ಗೌಡರಿಗೆ ಸರಿಸಾಟಿಯಾಗಿ ತಾನೂ ಕೂಡ ವಾಡೆಯ ಹಗೆಗಳಿಂದ ಜೋಳ ಹಂಚುತ್ತಾನೆ. ಇಲ್ಲೆಲ್ಲ ದ್ವೇಷ, ಈರ್ಷ್ಯೆ ಕಂಡುಬರುತ್ತದೆಯೇ ಹೊರತು ಬಡವರ ಬಗೆಗಿನ ಅನುಕಂಪವಲ್ಲ. ದನವೂ ತಿನ್ನದಂಥ ಕಾಳು ಹಂಚಿದ್ದು, ದಾದಾನ ಮೇಲೆ

ಮೂಗರ್ಜಿ ಮಾಡಿದ್ದು, ಅದರ ಚೌಕಾಸಿಗೆ ಯಮುನಂಥ ಅಧಿಕಾರಿ ಕರೆಸಿದ್ದು ಇವು ಪಡಪಪ್ಪನ ನೀಚತನಕ್ಕೆ ಸಾಕ್ಷಿಯಾಗಿದ್ದುವು. ಈತ ಕೊಟ್ಟ ಏರ್ಪಾಡು ಊರಿನ ಸಮಸ್ಯೆಯನ್ನು ಮತ್ತಷ್ಟು ಉಲ್ಬಣಗೊಳಿಸುತ್ತದೆ. ಮಾತುಗಾರಿಕೆಯಲ್ಲಿ ನಿಪುಣನಾದ ಪಡಪಯ್ಯ ಅಮಲ್ದಾರರೆದುರು ಗೌಡರ ಹಗೆ ಲೂಟಿ ಮಾಡಲು ಸಂಚು ರೂಪಿಸಿದ್ದು ದಾದಾ ಎಂದು ಆರೋಪ ಹೊರಿಸಿದ್ದಲ್ಲದೆ ನಾನಾನ ಸಾವಿಗೆ ದಾದಾನೇ ಕಾರಣ ಎಂಬುದಾಗಿ ತಿಳಿಸುತ್ತಾನೆ. ಏಕಕಾಲದಲ್ಲಿ ಎಲ್ಲ ಆರೋಪವನ್ನು ದಾದಾನ ಮೇಲೆ ಹೊರಿಸುತ್ತಾನೆ. ಸತ್ಯವನ್ನು ಸುಳ್ಳೆಂದು ಸುಳ್ಳನ್ನು ಸತ್ಯವೆಂದು ಸಾಧೀತು ಪಡಿಸುವಲ್ಲಿ ಪಡಪಯ್ಯ ಚತುರನಾಗಿದ್ದಾನೆ.

“ಪಡಪಪ್ಪನವರ ಸ್ವಭಾವಕ್ಕೆ ಶಾಸ್ತ್ರಕ್ಕಾದರೂ ಒಂದು ಒಳ್ಳೆಯ ಗುಣ ಅಂಟಿಕೊಂಡು ಬಂದಿಲ್ಲ. ಕಾದಂಬರಿಯ ವಸ್ತುವಿನ ಗತಿಯನ್ನು ನಿಶ್ಚಿತಗೊಳಿಸಿದ ಪಾಪದ ಹೊಳೆಯ ಪ್ರತೀಕವೆಂಬಂತೆ ಇಲ್ಲಿ ಕಾಣಿಸಿಕೊಂಡಿದ್ದಾರೆ”[illegible]. ಬಾಳಾಚಾರ್ಯರೇ ಒಂದು ಕಡೆ ಪಡಪಪ್ಪನ ವ್ಯಕ್ತಿತ್ವದ ಸ್ವರೂಪವನ್ನು ಸ್ವಲ್ಪಮಟ್ಟಿಗೆ ತಮಾಷೆಯಿಂದಲೇ ಚಿತ್ರಿಸುತ್ತಾರೆ.

“ಊರಿಗೆ ಕಲ್ಯಾಣ ಆಗಿ. ಪಡದಯ್ಯನ ಪುಚ್ಚ ಹಾರುತ್ತಿದ್ದರ ನಾವೂ ಏನೂ ಬ್ಯಾಡನ್ನೋದುಲ್ಲ. ಆದರೆ ಪಡಪಯ್ಯನ ಸ್ವಭಾವನ ನೆಚ್ಚಿಗೀದಲ್ಲ. ಆ ಬಾಪೂ ಸಾಹೇಬ ಒಬ್ಬ ಹುಚ್ಚ. ಅವನ್ನ ಪಡಪಪ್ಪ ತನ್ನ ಅಂಗೈಯಾಗಿಟ್ಟು ಕುಣಸತಾನೆ. ಅವನ ಕೂದಲಕ್ಕ ಕೊಂಕ ಆಗಗೊಡದಲ್ಲ ಅಂತ ಬಾಯಿಲೇ ಹೇಳತಾನ: ಕೈಲೇ ಅವನ ಮ್ಯಾಲೇ ಮೂಕಿ ಅರ್ಜಿ ಮಾಡಿಸಿ ಫೌಜುದಾರರನ್ನ ಕಸತಾನ. ಪುತಳಾಬಾಯಿ ಪ್ರಕರಣದೊಳಗಿಂದ ಪಾರಾಗಬೇಕಾದರೆ ಎರಡು ಸಾವಿರ ರೂಪಾಯಿ ಫೌಜುದಾರಗ ಕೊಡು ಅಂತ ಉಪದೇಶನೂ ಮಾಡತಾನ: ನಾನಾನ ಮರಣದ ಪ್ರಕರಣದೊಳಗ ನಾವೆಲ್ಲಾ ಲಂಚಾ ತಿಂದು ಗಪ್ಪ ಮಾಡಿದಿವಿ ಅಂತ ಹೇಳತಾನೆ. ಈಗ ಪುತಳಾಬಾಯಿ ಸತ್ತಳು: ಗೌಡರು ಖೊಟ್ಟಿ ಪಂಚನಾಮಾ ಬರಸಬೇಕೂ ಅಂತೂ ಹೇಳತಾನ. ಒಟ್ಟೇನು. ಮಾತಿಗೆ ಕೃತಿಗೆ ಥಾಕಿಲ್ಲದ ಮನುಷ್ಯ. ಇಂಥಾವನ ಕಿಳ್ಳೇಕ್ಯಾತರಾಟಾ ಊರು ಎಷ್ಟಂತ ತಡಕೋಬೇಕೂ. ಮತ್ತ ಯಾಕ ತಡಕೋಬೇಕು? ಅವನ ಸಂಗತಿ. ಹಾವಿನ ಸಂಗತಿ ಎರಡೂ ಸಮಾ”[illegible]–ಈ ಪ್ರತಿಭಟನೆ ಕಾದಂಬರಿಯ ಪ್ರಾರಂಭದಲ್ಲೇ ಕಂಡುಬಂದರೂ ಕೂಡ ಪಡಪಪ್ಪನವರು ಪಾದಕ್ಕೆಯ ಸರ್ವನಾಶವಾದ ಮೇಲೂ ಉಳಿಯುತ್ತಾರೆ.

ಬಾಪುಸಾಹೇಬನ ಪಡಪಪ್ಪನೊಂದಿಗಿನ ಸ್ನೇಹ ಪಾಡೆಯ ನಾಶಕ್ಕೆ ಕಾರಣವಾಗುತ್ತದೆ. “ಪಡಪಪ್ಪ ಬಲಶಾಲಿಯಿರಬಹುದು. ಆದರೆ ಅವನ ಪಕ್ಷವೇ ಅನ್ಯಾಯದ್ದು. ಅವನ ಜೊತೆ ಸ್ನೇಹ ಮಾಡುವುದೆಂದರೆ ಬೇತಾಳವನ್ನು ವಶಪಡಿಸಿಕೊಂಡಂತೆ. ಮಂತ್ರಶಕ್ತಿ ಜೀವಂತವಾಗಿರುವವರೆಗೆ ಆಡಿದ ಮಾತನ್ನು ಈಡೇರಿಸಿಕೊಡುವ ವೇತಾಳ ಮಂತ್ರದ

ಬಲ ಕುಗ್ಗಿದೊಡನೆ ವಶಪಡಿಸಿಕೊಂಡವನನ್ನೇ ನಾಶಗೊಳಿಸುವಂತೆ ಪಾಪದ ಸಹವಾಸದ ಫಲ”[22] ಎಂಬ ಯಶವಂತರಾಯರ ಮಾತು ಕೊನೆಗೆ ಸತ್ಯವಾಗುತ್ತದೆ. ತನ್ನ ತಪ್ಪನ್ನು ನಯವಾಗಿ ಮತ್ತೊಬ್ಬರ ಮೇಲೆ ಹೊರಿಸಿ ತಾನು ನುಣುಚಿಕೊಳ್ಳುತ್ತಾನೆ. ಕಾಲರಾ ಬಂದು ಇಡೀ ಊರೇ ತಲ್ಲಣಗೊಂಡಿರುವಾಗ ಜನರಿಗೆ ಯಾವ ಸಹಾನುಭೂತಿ, ಸಾಂತ್ವನ ಹೇಳದೆ ಊರಿಂದ ಪರಾರಿಯಾಗುತ್ತಾನೆ.

ಶಂಕರಪ್ಪಗೌಡನಿಂದ ಸೋಡಾಚೀಟಿ ಪಡೆದುಕೊಂಡಿದ್ದ ಮೊದಲ ಹೆಂಡತಿಯ ಮಗನಾದ ಲಿಂಗಪ್ಪನನ್ನು ಕರೆತಂದು ಆತನನ್ನು ಎತ್ತುಕಟ್ಟಿ ಗೌಡರ ವಾರಸಾ ಮಾಡಬೇಕೆಂದು ಹೊಂಚುಹಾಕುತ್ತಾನೆ. ಮೂವತ್ತು ವರ್ಷಗಳ ಹಿಂದೆಯೇ ಸಂಬಂಧವನ್ನು ಹರಿದುಕೊಂಡು ಹೋಗಿ ಬೇರೊಬ್ಬನಿಗೆ ಹುಟ್ಟಿದ ಮಗನನ್ನು ಗೌಡರ ಮನೆತನದ ಉತ್ತರಾಧಿಕಾರಿಯನ್ನಾಗಿ ಮಾಡುವುದು ನೀತಿಗೆಟ್ಟ ಕೆಲಸವೆಂದು ಗೊತ್ತಿದ್ದರೂ ಈ ಕೆಲಸಕ್ಕೆ ಕೈ ಹಾಕುತ್ತಾನೆ. ಆತನನ್ನು ಮುಂದಿಟ್ಟುಕೊಂಡು ಗೌಡರ ಹೊಲದಲ್ಲಿ ಬೆಳೆದ ಬದುಕು ಲಿಂಗಪ್ಪಗೌಡರದೆಂದು ಹೊಲವನ್ನು ಲೂಟಿ ಮಾಡಲು, ಅವರ ಮನೆಯ ಹಿತ್ತಲಿನಲ್ಲಿದ್ದ ಹುಳ್ಳು ಬಾನುಗಳನ್ನು ಕದಿಯಲು ಜನರನ್ನು ಪ್ರೇರೇಪಿಸುತ್ತಾನೆ. ಜನರಲ್ಲಿ ನೈತಿಕತೆಯನ್ನು ಬೆಳೆಸಬೇಕಿದ್ದ ಮಠಾಧಿಪತಿಯೇ ಲೂಟಿ, ಕಳ್ಳತನಕ್ಕೆ ಪ್ರೋತ್ಸಾಹ ನೀಡುವುದು ಸಾಂಸ್ಕೃತಿಕ ಮೌಲ್ಯಗಳ ಕುಸಿತವೆನ್ನಬಹುದು.

ದಾದಾ ಬೇಟೆಯ ಸಂದರ್ಭದಲ್ಲಿ ಹಾವನೂರಿನವರೊಂದಿಗೆ ಮಾಡಿಕೊಂಡ ಜಗಳವನ್ನು ತಿಳಿದ ಪಡದಯ್ಯ ಆತನ ಮೇಲೆ ಹಾವನೂರಿನ ಗೌಡರಿಂದ ದೂರು ಕೊಡಿಸುತ್ತಾನೆ. ಪ್ರತಿಯೊಂದು ಘಟನೆಯನ್ನು ತನ್ನ ಸ್ವಾರ್ಥಕ್ಕೆ, ಈರ್ಷೆಗೆ ಬಳಸಿಕೊಳ್ಳುತ್ತಾನೆ. ದಾದಾನನ್ನು ಜಾಮೀನಿನ ಮೇಲೆ ಬಿಡಿಸಿಕೊಂಡು ಬಂದ ಜೆನ್ನಪ್ಪನ ಬಣವಿಗೆ ಬೆಂಕಿ ಹಚ್ಚಿದ್ದಕ್ಕೆ ಕಾರಣ ಪಡದಪ್ಪನೇ ಆಗಿರುತ್ತಾನೆ. ಈತನ ಕಿಡಿಗೇಡಿತನ ಮಠಾಧೀಶತೆಯ ಅಧಃಪತನವನ್ನು ಸೂಚಿಸುತ್ತದೆ. “ಪಡದಪ್ಪನವರು ಈ ಊರಾಗ ಮರಿ ಆಗಿ ಬಂದಾರು ಒಂದಿಲ್ಲದ ಒಂದು ರೀತಿಯಿಂದ ಊರು ಕೆಟ್ಟು ಹೋಗೇತಿ ಗೌಡರ ವತನಕ್ಕೆ ನೀರು ಹಚ್ಚಿಟ್ಟರು. ತುಂಬಿ ಬೆಳೆದ ಹೊಲಾ ಲೂಟಿ ಮಾಡಸಬೇಕಂತ ಕಾಯಕ ಹೂಡಿದರು. ಇಂಥಾವರು ಊರಾಗ ಇದ್ದರ ದಿನದಿನಕ ಬೆಂಕಿ ಬಿಸಿ ನೀರು ಬೆಚ್ಚಗಾಣಿಸಿಕೊಂಡ ಹೊಕ್ಕಾವ. ಅದಕ ಇವರು ಊರು ಬಿಟ್ಟು ಹೋಗೂ ಮಟಾ ಊರ ಶಾಂತ ಆಗಾಣಿಲ್ಲ. ಆದರ ಮಟಾ ದೈವದ್ದು. ದೈವದವರ ಆದರೆ ಮಾನಾಮರ್ಯಾದಿ ಕಾಯಬೇಕು. ಅದ ಬುನಾದೀಲಿದ್ದ ಪಡದಪ್ಪನವರ್ನ ಹೊರಗೆ ಹಾಕಿದರೆ ಮಠದ ಬಾಗಿಲಿಗೆ ಕೀಲಿ ಬೀಳತತಿ. ಅದಕ್ಕೆ ಮಠಕೊಬ್ಬ ಸಂಪನ್ನ ಗುಣದ ನಡೆದುಬಂದ ಮಟಾ ಕುಡುಕಿನ ದಡ್ಡಿ ಆಗೇತಿ.ಅದಕ್ಕೆ ಮಟಕೊಬ್ಬ ಸಂಪನ್ನ ಗುಣದ

ಮರಿಮಾಡಿ ಮಠಾ ಅವರ ತಾಬೇಕ್ಕ ಕೊಟ್ಟು ಪಡದಪ್ಪನವರು ಊರು ಬಿಡಬೇಕು. ಇದ ದೈವದರೆದುರಿಗೆ ನನ್ನ ಅರ್ಜಿ ಐತಿ. ಇದಕ್ಕ ಅವರ ಕಬೂಲ ಮಾಡದಿದ್ದರ, ಇದ ಕಲ್ಲ್ಯಾನ್ನ ಸಾಕ್ಷಿ ಇಟ್ಟು ಅವರ್ನ ಜೇಲಿಗೆ ಕಳಸಬೇಕಾಗತ್ತೈತಿ. ದೈವದವರು ತಮಗೆ ಸರಿಕಂಡದ್ದನ್ನು ಮಾಡಲಿ” ಎಂದು ಜಿನ್ನಪ್ಪ ತನ್ನ ಜನ್ಮದಲ್ಲಿಯೇ ಮೊಟ್ಟಮೊದಲ ಬಾರಿ ತುಂಬಿದ ಸಭೆಯಲ್ಲಿ ತನ್ನ ಅಭಿಪ್ರಾಯವನ್ನು ಮಂಡಿಸುತ್ತಾನೆ. ಎತ್ತುಗಳೊಂದಿಗೆ ದುಡಿ ದುಡಿದು ಮೂಕನಾಗಿದ್ದ ಜಿನ್ನಪ್ಪನೇ ಇಷ್ಟು ಮಾತಾಡುವಂತಾಗ ಬೇಕಾದರೆ ಪರಿಸ್ಥಿತಿ ಎಷ್ಟು ವಿಪರೀತಕ್ಕೋಗಿದೆ ಎಂಬುದು ಮನವರಿಕೆಯಾಗುತ್ತದೆ. ಇಷ್ಟೆಲ್ಲಾ ಕೃತ್ಯಗಳಿಗೆ ಕಾರಣಕರ್ತನಾದ ಪಡದಪ್ಪನಿಗೆ ಯಾವ ಶಿಕ್ಷೆಯನ್ನು ಕೊಡದೆ ಆತನನ್ನು ಮಠದಿಂದ ಇಳಿಸಿ ಊರಿಂದ ಹೊರಹಾಕಲಾಗುತ್ತದೆ. ಮಠಬಿಟ್ಟು, ಊರು ಬಿಟ್ಟು ಹೋದಾಕ್ಷಣ ಅಪರಾಧಿಗೆ ಶಿಕ್ಷೆ ಕೊಟ್ಟ ಹಾಗೆ ಆಗೋದಿಲ್ಲ. ಆತ ಪಲಾಯನ ಮಾಡಲು ಅನುವು ಮಾಡಿಕೊಟ್ಟಂತಾಗುವುದಿಲ್ಲವೆ? ಯಾರೇ ಮಾಡಿದರು ತಪ್ಪು ತಪ್ಪೆ. ಆದರೆ ಮಠಾಧೀಶನಿಗೆ ಶಿಕ್ಷೆ ಕೊಟ್ಟರೆ ದೇವರು ಮುನಿಯಬಹುದು ಎಂಬ ಪಾಪಪ್ರಜ್ಞೆ, ಮಠಕ್ಕಿರುವ ಪಾವಿತ್ರ್ಯತೆ ಹಾಳಾಗಬಹುದೆಂಬ ಧಾರ್ಮಿಕ ಅಂಧಶ್ರದ್ಧೆ ಪಡದಪ್ಪನನ್ನು ಪಾರು ಮಾಡುತ್ತದೆ.

ಪಾವಳ್ಳಿಯ ದುರಂತತೆಯನ್ನು ಚಿತ್ರಿಸುವುದೇ ಲೇಖಕರ ಉದ್ದೇಶವಾಗಿರುವುದರಿಂದ ಊರಿಂದ ಹೊರದೂಡಲ್ಪಟ್ಟ ಪಡದಪ್ಪ ಮತ್ತೆ ಲಿಂಗಪ್ಪನೊಂದಿಗೆ ಆಗಮಿಸುತ್ತಾನೆ. ಮಹಾರಾಜರೊಂದಿಗೆ ಬಂದ ಅಸಿಸ್ಟೆಂಟ್ ಕಲೆಕ್ಟರ್ ಆದ ಗಿಬ್ಸನ್ ಸಾಹೇಬರೆದುರು ತನಗೆ ಅನ್ಯಾಯವಾಗಿದೆ ಎಂದು ಮನವಿ ಮಾಡಿಕೊಂಡ ಪಡದಪ್ಪನ ಮಾತುಗಳನ್ನು ಕೇಳಿ ಸಾಹೇಬರು ಪೂರ್ವಾಪರ ಯೋಚಿಸದೆ “ಪಡದಪ್ಪನವರು ಮೂಲ ಪಟ್ಟದ ಅಧಿಕಾರಿಗಳು: ಅಂದಮೇಲೆ ಅವರಿಗೆ ಮಠದಲ್ಲಿರಲು ಸಂಪೂರ್ಣ ಸ್ವಾತಂತ್ರ್ಯವಿರಬೇಕು. ಅವರನ್ನು ಯಾರೂ ಆತಂಕಪಡಿಸಲಾಗದೆಂದು ಸಾರುವ ಆಜ್ಞೆಯನ್ನು ಹೊರಡಿಸಿದರು”. ಈ ತೀರ್ಪು ಪಡದಪ್ಪನವರ ಅಧಿಕಾರ ದರ್ಪ, ಕುತಂತ್ರಗಳು ಹೆಚ್ಚಾಗಲು ಕಾರಣವಾಯಿತು. ಜನರ ನಂಜಿಕೆಯನ್ನು ಹುಸಿಮಾಡಿತು. ‘ಹೋದ್ಯಾ ಪಿಶಾಚಿ ಅಂದರೆ ಬಂದೆ ಗವಾಕ್ಷಿಲಿ’ ಎಂಬಂತೆ ಪಡದಯ್ಯ ಪಾವಳ್ಳಿಗೆ ಆಗಮಿಸಿದ್ದ. ಇವನೊಟ್ಟಿಗೆ ಬಂದ ಲಿಂಗಪ್ಪನ ಪರವಾಗಿ ವಾರಸಾತೀರ್ಪು ಕೊಟ್ಟಿದ್ದರಿಂದ ಗೌಡರ ಹೊಲ ಮತ್ತು ವಾಡೆಯನ್ನು ವಶಪಡಿಸಿಕೊಳ್ಳಲು ಮುಂದಾಗುತ್ತಾನೆ. “ಪಾರ್ವತವ್ವನನ್ನು ಗೌಡರ ವಾಡೇದಿಂದ ಹೊರಗೆ ಹಾಕಿ ವಾಡೇದ ಕಬಜಾ ತೊಗೊಂಡು ನಿಮ್ಮ ದರಬಾರ ಅಲ್ಲಿ ನಡಿಯಾದನ್ನ ಈ ಕಣ್ಣು ಕಾಣಬೇಕಾಗೇತಿ” ಎಂಬ ಪಡದಪ್ಪನ ಆಸೆ ನೀಚತನದ ಪರಮಾವಧಿ ಎನಿಸುತ್ತದೆ. ಜಗತ್ತಿನಲ್ಲಿ ಇಷ್ಟು ಕೀಳು ಮಟ್ಟದ ಮಠಾಧಿಪತಿ ಇದ್ದಾರೆಯೇ? ಅವರನ್ನು ಜನ ಹೇಗಾದರೂ ಸಹಿಸುತ್ತಾರೆ ಎಂದೆನಿಸುತ್ತದೆ. ಇಂಥವರಿಂದ ಸಮಾಜದಲ್ಲಿ ನೈತಿಕತೆ, ಧಾರ್ಮಿಕತೆ ಉಳಿಯುವುದಾದರೂ ಹೇಗೆ? ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ.

ಚಿಮಣಾಳಿಗೆ ಎಸಗಿದ ಅನ್ಯಾಯಕ್ಕೆ ತಕ್ಕ ಶಾಸ್ತಿಯಾಗಿದ್ದರೆ ಮುಂದೆ ಆಗುವ ಅನಾಹುತಗಳನ್ನು ತಪ್ಪಿಸಬಹುದಿತ್ತೇನೋ ಎನಿಸುತ್ತದೆ. ಆದರೆ ದುರಂತದ ಚಿತ್ರಣದ ನಾಂದಿಯಾಗಿ ಈ ಎಲ್ಲಾ ಕೃತ್ಯಗಳನ್ನು ಸಹಿಸಿಕೊಂಡಿದ್ದಾರೆ.

ಇಷ್ಟೆಲ್ಲ ಪಾಪಕಾರ್ಯ ಮಾಡಿದ ಪಡದಯ್ಯ ಎಲ್ಲಿಯೂ ಕೂಡ ತನ್ನ ತಪ್ಪಿಗೆ ಪ್ರಾಯಶ್ಚಿತ್ತದ ಮಾತಾಗಲಿ ಅಥವಾ ನೋವಾಗಲಿ ಪಡುವುದು ಇಲ್ಲ. ಅವನ ಅಂತರಂಗ ಎಲ್ಲೂ ತೆರೆಯುವುದಿಲ್ಲ. ಕಾಲರಾ ಬಂದು ಇಡೀ ಊರು ತಳಮಳಿಸುತ್ತಿರುವಾಗ ಊರಿಂದ ಪರಾರಿಯಾಗುತ್ತಾನೆ. ಮುಂದೆ ಪ್ಲೇಗು ಊರನ್ನು ಅಸ್ತವ್ಯಸ್ತಗೊಳಿಸಿದಾಗ ಕಂಡೂ ಕಾಣದ ಹಾಗೆ ತಣ್ಣಗೆ ಊರನ್ನೇ ಬಿಟ್ಟು ಹೋಗುತ್ತಾನೆ. ಊರಿನ ಬಗ್ಗೆ ಅಂತಃಕರಣ ಅಭಿಮಾನಗಳನ್ನು ಎಲ್ಲೂ ಪ್ರಕಟಿಸುವುದಿಲ್ಲ. ಹೀನಕಾರ್ಯಗಳಿಗೆ ಮುಖಂಡನಾಗಿ ಮೆರೆಯುತ್ತಾನೆ. ಕೆಡುಕಿಗೆ ಸಂಕೇತವಾಗಿ ಕಾದಂಬರಿಯುದ್ದಕ್ಕೂ ಕಾಣಿಸಿಕೊಳ್ಳುತ್ತಾನೆ

## ಶೇಷಪ್ಪ

'ಗ್ರಾಮಾಯಣ' ಕಾದಂಬರಿಯ ಪ್ರಾರಂಭದಿಂದ ಅಂತ್ಯದವರೆಗೂ ಕ್ರಿಯಾಶೀಲ ವ್ಯಕ್ತಿಯಾಗಿ. ಅದ್ಭುತ ಕಾರ್ಯಸಾಮರ್ಥ್ಯವುಳ್ಳ ವ್ಯಕ್ತಿಯಾಗಿ ಕಾಣಿಸಿಕೊಳ್ಳುವ ಪಾತ್ರವೆಂದರೆ ಕುಲಕರ್ಣಿ ಶೇಷಪ್ಪ. ಈತನ ಶಕ್ತಿ ಸಾಮರ್ಥ್ಯಗಳು ಊರಿನ ಒಳಿತಿಗಾಗಿ ವಿನಿಯೋಗವಾಗದೆ ತನ್ನ ಸ್ವಾರ್ಥ ಸಾಧನೆಗೆ ಬಳಕೆಯಾಗುತ್ತದೆ. ಪಾದಳ್ಳಿವನೇ ಆಗಿದ್ದರೂ ಸ್ವಾರ್ಥಕ್ಕೆ ಅಭಿಮಾನವನ್ನೇ ತೂರೆದು ನಿಲ್ಲುತ್ತಾನೆ. ಊರಿನಲ್ಲಿ ಜರುಗುವ ಯಾವುದೇ ಪ್ರಸಂಗವನ್ನು ಸ್ವಾರ್ಥಕ್ಕೆ ಬಳಸಿಕೊಳ್ಳಲು ಸದಾ ಹವಣಿಸುತ್ತಿರುತ್ತಾನೆ. ಅಕ್ಷರ ಜ್ಞಾನ, ಕಾಯಿದೆ ಜ್ಞಾನವನ್ನು ಬಲ್ಲ ಈತ. 'ಮದುವೆ ಮಾಡಿ ಹೋಳಿಗೆ ತಿನ್ನುವವನಲ್ಲ: ಬಣವೆ ಸುಟ್ಟು ಅರಳು ತಿನ್ನುವ ಸ್ವಭಾವದವನು'. 'ಗೆದ್ದಲಿಯ ಹುತ್ತಿನಲ್ಲಿ ವಾಸಮಾಡುವ ಹಾವು" ಇದ್ದಂತೆ. ಎನ್ನುವ ಮಾತುಗಳು. ಶೇಷಪ್ಪನ ಗುಣಸ್ವಭಾವವನ್ನು ಪರಿಚಯಿಸಿಕೊಡುತ್ತವೆ.

ನಾನಾ ಸಾಹಿನ. ಪ್ರಕರಣದಲ್ಲಿ ತನಗೆ ಸಲ್ಲಬೇಕಿದ್ದ ಹಣ ದೊರೆಯದ ಕಾರಣ ಗೌಡರ ವಿರುದ್ಧ ಹಗೆ ಸಾಧಿಸುತ್ತಾನೆ. ಗೌಡರ ಹಗೆಗಳನ್ನು ಲೂಟಿ ಮಾಡಲು ಸಂಚು ರೂಪಿಸುತ್ತಾನೆ. ಬಾಪು ಮತ್ತು ಪಡದಪ್ಪನ ಪಕ್ಷ ಸೇರಿ ಊರಲ್ಲಿ ಬಣಕಟ್ಟಲು ಸಿದ್ಧನಾಗುತ್ತಾನೆ. ಎರಡು ಬಣಗಳ ವೇಷ ಧರಿಸಬಲ್ಲ ತಂತ್ರಗಾರ. ಕುಲಕರ್ಣಿಕಿ ವೃತ್ತಿ ಕಾಮರೂಪವನ್ನು ಸಹಜವಾಗಿ ಕಲಿಸಿದೆ. ಕಾಯದೆ ಜ್ಞಾನ ಆತನ ಸಂಪತ್ತು. ಅದರ ಬಲದಿಂದ ಪಾದಳ್ಳಿಯನ್ನೇ ಕುಣಿಸುವ ಶಕ್ತಿ ಅವನಲ್ಲಿದೆ. ಊರಲ್ಲಿ ಬಡಿದಾಟಗಳಾಗುತ್ತಿರಬೇಕು; ಜನ ಕೋರ್ಟು ಕಛೇರಿ ಅಡ್ಡಾಡಬೇಕು; ಅಂದರೆ ನಾಲ್ಕಾರು ದುಡ್ಡು ತನಕೆ ದಕ್ಕೀತೆಂದು ಅವನ ಹಂಚಿಕೆ.

ಶೇಷಪ್ಪನ ಪಾತ್ರ ಸಮಕಾಲೀನ ರಾಜಕೀಯ ಮತ್ತು ರಾಜಕಾರಣಿಗಳನ್ನು ನೆನಪಿಗೆ ತರುತ್ತದೆ. ಒಮ್ಮೆ ಬಾಪು-ಪಡದಪ್ಪನೊಟ್ಟಿಗೆ ಇದ್ದುಕೊಂಡು ಗೌಡರ ವಿರುದ್ಧ ಹಗೆ ಸಾಧಿಸುವಾತ ಮತ್ತೊಮ್ಮೆ ಬಾಪು- ಪಡದಪ್ಪನ ವಿರುದ್ಧವೇ ನಿಲ್ಲುತ್ತಾನೆ. ಒಂದು ರೀತಿಯ ಪಕ್ಷಾಂತರಿಯ ರೀತಿ ತನ್ನ ಆಟಕ್ಕೆ ಅವಕಾಶಗಳು ಕಡಿಮೆ ಎನಿಸಿದಾಗ ಮೆಲ್ಲನೆ ಅಲ್ಲಿಂದ ಜಾರಿ ಕೊಳ್ಳುತ್ತಾನೆ. ಬಂಧನಕ್ಕೆ ಒಳಗಾಗಿರುವ ದಾದಾನನ್ನು ಜಾಮೀನಿನಿಂದ ಬಿಡುಗಡೆ ಮಾಡಲು ಉಪಾಯವನ್ನು ಹೇಳಿಕೊಟ್ಟಿದ್ದಲ್ಲದೆ ಸ್ವತಃ ತಾನೇ ಮುಂದಾಗಿ ಓಡಾಡುತ್ತಾನೆ. ಈ ಕಾರ್ಯಕ್ಕೆ ಜನರಿಂದ ಸಾಕಷ್ಟು ಹಣವನ್ನು ವಸೂಲಿ ಮಾಡುತ್ತಾನೆ. ಪಾದಳ್ಳಿಗೆ ಕುಲಕರ್ಣಿಯಾಗಿ ಶ್ಯಾಮರಾಯರು ಬರುತ್ತಿದ್ದಾರೆಂದು ತಿಳಿದಾಗ ತನ್ನ ಸ್ಥಾನಕ್ಕೆ ಪೆಟ್ಟು ನೀಡುತ್ತಾರೆಂದು ಆತಂಕಗೊಂಡ ಶೇಷಪ್ಪ ಆತನು ಪಾದಳ್ಳಿಗೆ ಬರದ ಹಾಗೆ ತಡೆಯಬೇಕೆಂದು ಸಾಕಷ್ಟು ತಂತ್ರವನ್ನು ರೂಪಿಸುತ್ತಾನೆ. ಆದರೆ ಅವುಗಳಾವುವೂ ಫಲಕಾರಿಯಾಗುವುದಿಲ್ಲ.

ಸ್ವಾರ್ಥಸಾಧಕತೆ ಶೇಷಪ್ಪನಲ್ಲಿ ರಕ್ತಗತವಾಗಿ ಬಂದ ಗುಣವಾಗಿತ್ತು. ಆ ಗುಣದ ಬಲದಿಂದಲೇ ಅವನು ಪಾದಳ್ಳಿಯ ನೆಲದಲ್ಲಿ ಬೇರುಬಿಟ್ಟು ಬೆಳೆಯಲು ಸಮರ್ಥನಾಗಿದ್ದ. ಎಂಥ ಸಂದರ್ಭದಲ್ಲೂ ಅವನ ಬುದ್ಧಿ ಸ್ವಂತ ಲಾಭದ ವಿಷಯವನ್ನೇ ಲೆಕ್ಕ ಹಾಕುತ್ತದೆ. ಊರಿಗೆ ಅಧಿಕಾರಿಗಳು ಬಂದಾಗ ಅವರಿಗೆ ಸರಬರಾಯಿ ವ್ಯವಸ್ಥೆ ಮಾಡುವುದು. ಅಧಿಕಾರಿಗಳ ಮುಖವನ್ನು ಓದಿ ಅರ್ಥ ಮಾಡಿಕೊಳ್ಳುವುದರಲ್ಲಿ ನಿಷ್ಣಾತನಾಗಿದ್ದ ಈತನಿಗೆ ಅವರನ್ನು ನಯವಾಗಿ ಓಲೈಸುವ ಗುಣ ಕರಗತವಾಗಿತ್ತು. ಊರಜನರ ಅನಕ್ಷರತೆಯನ್ನು, ಗೌಡತಿಯ ಅಸಹಾಯಕತೆಯನ್ನು ದುರುಪಯೋಗ ಪಡಿಸಿಕೊಂಡ ಶೇಷಪ್ಪ ಶ್ಯಾಮರಾಯ ಕುಲಕರ್ಣಿಯಾಗಿ ನೇಮಕವಾಗದಂತೆ, ದಾದಾ ಪುನಃ ಜೈಲು ಸೇರುವಂತೆ ತಂತ್ರ ರೂಪಿಸಿ ಮೋಸದಿಂದ ಊರಿನ ಎಲ್ಲರಿಂದ ಸಹಿ ಸಂಗ್ರಹಿಸುತ್ತಾನೆ. ಇದು ಸಾಲದೆಂಬಂತೆ ಕಾಲರಾ ಪಿಡುಗು ಅನೇಕ ಜನರನ್ನು ಆಹುತಿ ತೆಗೆದುಕೊಂಡಾಗ ವಾರಸಾ-ರಿಜಿಸ್ಟರದಲ್ಲಿ ಲೆಕ್ಕವಿಲ್ಲದಷ್ಟು ಅನ್ಯಾಯ, ಮೋಸಗಳನ್ನು ನಡೆಸಿರುತ್ತಾನೆ. ಈತನ ವಂಚನೆ ದೇಶಪಾಂಡೆ ಮನೆತನದ ಜಮೀನುಗಳೆಲ್ಲವನ್ನು ಕಬಳಿಸುವ ಹಂತದವರೆಗೆ ಹೋಗಿರುತ್ತದೆ. ಇಷ್ಟೆಲ್ಲ ಮೋಸ ಮಾಡಿದ ಶೇಷಪ್ಪ ಕೊನೆಗೆ ತಾನೇ ಎಣೆದ ಬಲೆಯಲ್ಲಿ ಸಿಕ್ಕಿ ಹಾಕಿಕೊಳ್ಳುತ್ತಾನೆ.

ಶೇಷಪ್ಪನಿಗೆ ಗಾಯದ ಮೇಲೆ ಗಾಯಗಳಾಗುತ್ತವೆ. ಎಂಥ ಅನಾನುಕೂಲ ಪರಿಸ್ಥಿತಿಯಲ್ಲಿಯೂ ದಾರಿ ಹುಟ್ಟಿರುವ ಅವನಿಗೆ ಎಲ್ಲ ದಾರಿಗಳು ಮುಚ್ಚಿದವೆನಿಸುತ್ತವೆ. ತನ್ನ ಜೊತೆಗೆ ಬಂದವರನ್ನೆಲ್ಲ ಸೂತ್ರದ ಗೊಂಬೆಗಳಂತೆ ಕುಣಿಸುವ ಅವನ ಬುದ್ಧಿ ಚಾತುರ್ಯಕ್ಕೆ ಬೆಲೆಯಿಲ್ಲದಂತಾಗುತ್ತದೆ. ಅವನು ರಚಿಸಿದ ಪಾತ್ರಗಳೇ ಅವನ ವಿರುದ್ಧ ಬಂಡು ಹೂಡುತ್ತವೆ. ಗೌಡತಿ, ವೆಂಕಣ್ಣಮಾಸ್ತರ ಇವರೆಲ್ಲ ಶೇಷಪ್ಪನ ವಿರುದ್ಧವಾಗಿ ಹೇಳಿಕೆ ಕೊಡುತ್ತಾರೆ. ತನ್ನನುಕೂಲಕ್ಕೆ ತಕ್ಕಂತೆ ಅಧಿಕಾರಿ ವರ್ಗದವರನ್ನೇ ಒಳಗು

ಮಾಡಿಕೊಳ್ಳುತ್ತಿದ್ದವನಿಗೆ ಶಿರಸ್ತೇದಾರರು. ಮಾಮಲೇದಾರರೆಲ್ಲರೂ ಅಸಹಾಯಕರಾಗಿ ಕಾಣುತ್ತಾರೆ. ಇನ್ನು ಮುಂದೆ ತನ್ನ ಕೈಯಲ್ಲಿ ದಪ್ತರ ಉಳಿಯಲಾರದು. ಶ್ಯಾಮರಾಯನಿಗೆ ಅಧಿಕಾರ ಬಿಟ್ಟುಕೊಡಬೇಕೆಂದು ಕೊಂಡಾಗಲಂತು ತೀವ್ರವಾದ ದುಃಖವಾಗುತ್ತದೆ. "ಕುಲಕರ್ಣಿಕೆಯ ದಪ್ತರ ಅವನ ಪಾಲಿಗೆ ಜನ್ಮಕ್ಕಂಟಿಕೊಂಡು ಬಂದ ಸಹಜವಾದ ಆಸ್ತಿಯಾಗಿತ್ತು; ಕರ್ಣನ ಕವಚಕುಂಡಲಗಳಂತೆ ಅವನ ಕ್ರಿಯಾಶಕ್ತಿಯ ಬಾಹ್ಯರೂಪವಾಗಿತ್ತು. ದಪ್ತರದ ಹಸ್ತಾಂತರ ಅವನ ದೃಷ್ಟಿಯಲ್ಲಿ ಪಾದಕ್ಕೆ ಗ್ರಾಮದ ಅಧಿಕಾರದ ಹಸ್ತಾಂತರದಷ್ಟೇ ಮಹತ್ವಪೂರ್ಣವಾಗಿತ್ತು. ಜೀವನವನ್ನು ಬಿಟ್ಟುಕೊಡುವಷ್ಟೇ ದುಃಖಪ್ರದವಾಗಿತ್ತು. ಸಕಲ ಪ್ರಯತ್ನಗಳೂ ವಿಫಲವಾಗಿರುವಾಗ. ಈ ದಪ್ತರನ್ನು ತ್ಯಜಿಸುವುದು ಅನಿವಾರ್ಯವಾಗಿದ್ದಾಗ. ಹುತಾತ್ಮನೊಬ್ಬನ ಆತ್ಮಾಹುತಿಯ ಅನುಭವ ಶೇಷಪ್ಪನಿಗೆ ಬರುತ್ತಿತ್ತು. ದೃಢನಿರ್ಧಾರದಿಂದ ಆ ನೋವನ್ನು ಸಹಿಸಬೇಕಾಗಿತು"[illegible]. ತಪ್ಪಿತಸ್ಥನಿಗೆ ಶಿಕ್ಷೆ ಕಟ್ಟಿಟ್ಟಬುತ್ತಿ. ಅದರಿಂದ ತಪ್ಪಿಸಿಕೊಳ್ಳುವುದು ಅಸಾಧ್ಯ ಎಂಬ ಮಾತು ಸತ್ಯವಾಗುತ್ತದೆ.

ಶೇಷಪ್ಪ ಬಡವರಿಗೆ ಮಾಡಿದ ಮೋಸ. ಸರ್ಕಾರಿ ಕಡತದಲ್ಲಿ ಬರೆದ ಸುಳ್ಳು ಲೆಕ್ಕ. ಶ್ಯಾಮರಾಯರ ನೇಮಕವಾಗದಂತೆ ಬರೆದ ಅರ್ಜಿ. ದೇಶಪಾಂಡೆಯವರ ಆಸ್ತಿ ಕಬಳಿಕೆ ತಂತ್ರ...... ಹೀಗೆ ಹಲವಾರು ಪ್ರಕರಣಗಳಿಂದ ಜೈಲು ಸೇರುವ ಸ್ಥಿತಿಗೆ ಬಂದು ತಲುಪುತ್ತಾನೆ. ಇಷ್ಟೆಲ್ಲಾ ಕುತಂತ್ರ. ಕಪಟತನ. ಮೋಸ ಸ್ವಾರ್ಥತೆಯಿಂದ ಕೂಡಿರುವ ಪಾತ್ರದ ಅಂತರಂಗ ತೆರೆಯುವುದು ಬಾಳಾಚಾರ್ಯರನ್ನು ಪಡದಪ್ಪನ ಗುಂಪಿನವರು ಮುಟ್ಟಲು ಬಂದಾಗ. ಗೌಡತಿಯ ವಾಡೆಯನ್ನು ವಶಪಡಿಸಿಕೊಳ್ಳಲು ಬಂದ ಲಿಂಗಪ್ಪ. ಪಡದಪ್ಪನರ ಗುಂಪನ್ನು ತಡೆದು ವಾಡೆಯ ಬಾಗಿಲಲ್ಲೆ ನಿಂತಿದ್ದ ಬಾಳಾಚಾರ್ಯರನ್ನು ನೂಕಿ ಒಳಗೆ ನಡೀರಿ ಎಂದು ಲಿಂಗಪ್ಪನ ಮಾತಿಗೆ ಅಡ್ಡಬಂದ ಶೇಷಪ್ಪ 'ಯಾರಾವರು ಬಾಳಾಚಾರ್ಯರನ್ನು ನುಗಿಸಿಕೊಡೋವರು? ಹಾಗೇನಾದರೂ ಮಾಡಿದರ ನಿಮ್ಮನ್ನೆಲ್ಲಾ ಸಾಲಬೇಡಿ ಹಾಕಿಸಿ ಜೇಲಿಗೆ ಅಟ್ಟಬೇಕಾಗಿದೀತು? ಪಡದಪ್ಪ ಬೆಂಕೀಮಟ್ಟಿ ಮುಟ್ಟಿ ಬದಕತೀಯ? ನಡೀರಿ ಸುಮ್ಮನೆ' ಎಂದು ಜನರ ಹಿಂಡನ್ನು ನುಗ್ಗಿ ಬಂದು ಕೂಗುತ್ತಾನೆ. ಅಲ್ಲದೆ ಪಾರ್ವತಪ್ಪನಿಗೂ ನ್ಯಾಯ ಒದಗಿಸಬೇಕು ಎಂಬ ನಿಲುವಿಗೆ ಬರುತ್ತಾನೆ. ತಾನೇ ಬೆಳೆಸಿದ, ಮೊದಲು ತನ್ನ ಆಪ್ತರಾಗಿದ್ದ "ಪಡದಪ್ಪ, ಲಿಂಗಪ್ಪ ಇವರೆಲ್ಲಾ ಜೈಲು ಕಾಣೂಹಾಂಕ ಮಾಡತೀನಿ. ಕುಲಕರ್ಣಿಕಿ ದಪ್ತರ ಹೋದರೇನಾತು ಆಚಾರ? ಅದಿಲ್ಲದಿದ್ದರೂ ಶೇಷಪ್ಪ ಏನ ಮಾಡಬಲ್ಲ ತೋರಸತೀನಿ"[illegible] ಎನ್ನುತ್ತಾನೆ. ಜೀವನದಲ್ಲಿ ಒಮ್ಮೆ ಸೋತರೂ ತನ್ನ ಕ್ರಿಯಾಶೀಲತೆಯನ್ನು ಕಳೆದುಕೊಳ್ಳದ ವ್ಯಕ್ತಿ ಶೇಷಪ್ಪ.

ಊರ ಹಿರಿಯ ಮುಖಂಡರುಗಳ ದ್ವೇಷ. ಈರ್ಷ್ಯೆ. ಸ್ವಾರ್ಥ. ಹಠ ಇವು ಒಂದು ಊರಿನ ಅವನತಿಗೆ ಹೇಗೆ ಕಾರಣವಾಗುತ್ತದೆಂಬುದನ್ನು ಈ ಪಾತ್ರದ ಮೂಲಕ ಚಿತ್ರಿಸಿದ್ದಾರೆ.

ಮನುಷ್ಯನಲ್ಲಿರುವ ಶಕ್ತಿಸಾಮರ್ಥ್ಯ ಒಳಿತಿಗೆ ವಿನಿಯೋಗವಾಗಬೇಕೆ ಹೊರತು ವಿನಾಶಕ್ಕಲ್ಲ ಎಂಬ ಸಂದೇಶವೂ ಇದೆ.

## ಶಂಕರಗೌಡರು

ಪಾದಕ್ಕಿಯ ಬಗೆಗೆ ತೀವ್ರ ಅಭಿಮಾನವನ್ನಿಟ್ಟುಕೊಂಡಿರುವ ಊರಿನ ಗೌಡರು ಶಂಕರಪ್ಪ. ಕಾದಂಬರಿಯ ಪ್ರಾರಂಭದಲ್ಲಿ ಹಠಮಾರಿತನ, ಈರ್ಷ್ಯೆ, ದ್ವೇಷ ಸಾಧಿಸುವ ಗುಣಗಳುಳ್ಳ ವ್ಯಕ್ತಿಯಾಗಿ ಕಂಡುಬರುವ ಇವರು ಕೊನೆಗೆ ತಪ್ಪಿನ ಅರಿವಾಗಿ ಊರ ಹಿತಕ್ಕಾಗಿ ತನ್ನ ಪ್ರಾಣವನ್ನೇ ಮುಡುಪಾಗಿಡಲು ಮುಂದಾಗುತ್ತಾನೆ.  ಊರ ಗೌಡರಾದ ಶಂಕರಪ್ಪನಿಗೆ ನಾಣಿನ ಸಾವು ಒಂದು ಸವಾಲಾಗಿ ಪರಿಣಮಿಸುತ್ತದೆ. ಶಿಲೇದಾರ ನಾಣಿ ಸಣ್ಣ ಮನುಷ್ಯನಾಗಿದ್ದರೂ ಅವನ ಮರಣ ಊರ ಪ್ರತಿಷ್ಠಿತರನ್ನೆಲ್ಲ ಸುತ್ತು ಹಾಕಿಕೊಂಡಿರುತ್ತದೆ. ಗೌಡರು ಈತನ ಸಾವಿಗೆ  ಬಾಪುಸಾಹೇಬ ಅಥವಾ ಜಿಮಣಾ ಇರಬಹುದೆಂದು ಸಂಶಯವ್ಯಕ್ತಪಡಿಸಿ ಜಿಮಣಾಳಿಂದ 'ನಮ್ಮ ತಂದೆಗೆ ಯಾರೋ ವಿಷ ಹಾಕಿ ಕೊಂದವರೆ' ಎಂದು ದೂರನ್ನು ತೆಗೆದುಕೊಂಡು ನಾಣಿನ ದೇಹವನ್ನು  ಪರೀಕ್ಷೆಗೊಳಪಡಿಸಲು ದವಾಖಾನೆಗೆ ಕಳುಹಿಸಬೇಕೆಂದು ಹಠ ಹಿಡಿಯುತ್ತಾನೆ. ಆದರೆ ಆಚಾರ್ಯರು ಬಾಪೂ ಸಾಹೇಬ ಇತರರ ಒತ್ತಾಯದ ಮೇರೆಗೆ ಲಂಚ ತೆಗೆದುಕೊಂಡು, ನಾಣಿನ ಸಾವು ಹೃದಯವಿಕಾರದಿಂದ ಎಂದು ಪಂಚನಾಮೆ ಬರೆದು ಪ್ರಕರಣವನ್ನು ಮುಚ್ಚಿ ಹಾಕುತ್ತಾನೆ. ಈ ಘಟನೆ ಇಷ್ಟಕ್ಕೆ ನಿಲ್ಲದೆ ಶೇಷಪ್ಪ ತನಗೆ ನಿರೀಕ್ಷಿಸಿದಷ್ಟು ಹಣ ಬರಲಿಲ್ಲವೆಂದು ತಕರಾರು ತೆಗೆಯುತ್ತಾನೆ. ಮುಂದೆ ಇದೇ ಸಂಗತಿ ವಾಡೆ–ಮಠ–ಗೌಡರ ಮನೆತನಗಳ ನಡುವೆ ದ್ವೇಷಕ್ಕೆ ಕಾರಣವಾಗುತ್ತದೆ.

ಬರಗಾಲದಿಂದ ಜನಸಾಮಾನ್ಯರು ಸಂಕಟಕ್ಕೆ ಗುರಿಯಾಗಿರುವಾಗ ಆಚಾರ್ಯರ ಸಲಹೆಯ ಮೇರೆಗೆ ಈ ಸಮಸ್ಯೆಯನ್ನು ಬಗೆಹರಿಸಲು ಮುಂದಾಗುತ್ತಾರೆ. 'ಪಾದಕ್ಕಿಯ ನೆಲದ ಮೇಲೆ ಗೌಡರ ಮನೆತನಕ್ಕಿರುವ ಅಭಿಮಾನ ಮತ್ತಾರಿಗೂ ಇರಲಿಲ್ಲ. ಅದು ಗೌಡರ ರಕ್ತದ ಗುಣ. ಕುಲಕರ್ಣಿಯಂತೆ ಹಾರುವ ಹಕ್ಕಿಯಲ್ಲ ಗೌಡರು. ಜನರು ಬದುಕಿದರೆ  ಮಾತ್ರ ತಾನು ಬದುಕಿದಂತೆ ಎಂಬ ಭಾವನೆ ಗೌಡರ ಮನೆತನದ ಸಂಸ್ಕೃತಿಯ ಜೀವಂತ ಅಂಶವಾಗಿತ್ತು. ಹಾಗಾಗಿ ಪಡದಪ್ಪನ ಪ್ರೇರಣೆಯಿಂದ ಬಡಜನರು ತಮ್ಮ ಹಗೆಗಳನ್ನು ಲೂಟಿ ಮಾಡುವ ಮುಂಚಿತವಾಗಿಯೇ ತಾವೇ ಖುದ್ದಾಗಿ ಬಡವರಿಗೆ ಕಾಳು ಹಂಚುತ್ತಾರೆ. ಆದರೆ ಇಲ್ಲಿ ಬಡವರ ಬಗೆಗಿನ ಅಂತಃಕರಣಕ್ಕಿಂತ ಹೆಚ್ಚಾಗಿ ಬಾಪೂ. ಶೇಷಪ್ಪ, ಪಡದಪ್ಪನ ಬಗೆಗಿನ ದ್ವೇಷ ಕಾರಣವಾಗಿರುತ್ತದೆ. ಬಡವರ ಹಸಿವನ್ನು ನಿವಾರಿಸುವುದರಲ್ಲೂ ಅವರ ಸ್ವಾರ್ಥತೆಯೇ ವಿಜೃಂಭಿಸುತ್ತದೆ. ಪಡದಪ್ಪ ಮತ್ತು ಜಿಮಣಾಳ

ನಡುವಿನ ಸಂಬಂಧದ ವಿಚಾರ ಗೊತ್ತಿದ್ದ ದಾನಪ್ಪನನ್ನು ಗುಪ್ತವಾಗಿ ತಮ್ಮ ಮನೆಯಲ್ಲೇ ಇರಿಸಿಕೊಂಡಿರುತ್ತಾರೆ. ಇದೆಲ್ಲದರ ಹಿಂದೆ ಪದವಿಯನ್ನು ಬಗ್ಗು ಬಡಿಯಬೇಕೆಂಬ ಹಠ ಇರುತ್ತದೆಯೇ ಹೊರತು ಒಂದು ಹೆಣ್ಣಿಗಾದ ಅನ್ಯಾಯವನ್ನು ಸರಿಪಡಿಸಬೇಕೆಂಬ ತೀವ್ರ ಕಳಕಳಿಯು ಇಲ್ಲ. ಹೀಗೆ ಊರಿನ ಪ್ರಮುಖರಲ್ಲಿ ಪರಸ್ಪರ ಕಂಡು ಬರುವ ಜಿದ್ದಾಜಿದ್ದು ಆ ಊರಿನ ಅವನತಿಗೆ ಹೇಗೆ ಕಾರಣವಾಗುತ್ತದೆಂಬುದನ್ನು ಕಾದಂಬರಿ ಅನನ್ಯವಾಗಿ ಚಿತ್ರಿಸಿದೆ.

ಗೌಡಿಕೆಯ ಅಧಿಕಾರ ದರ್ಪದಿಂದ ಬೀಗುವ ಶಂಕರಪ್ಪನನ್ನು ಆಘಾತಗೊಳಿಸುವ ಸಂಗತಿಯೆಂದರೆ ತಮ್ಮಿಂದ ಸೋಡಚೀಟಿ ಪಡೆದುಕೊಂಡು ಹೋಗಿದ್ದ ಹಿರಿಯ ಹೆಂಡತಿಯ ಮೊದಲ ಮಗ ತನ್ನ ವಾರಸುದಾರನಾಗಿ ಬರುತ್ತಾನೆಂಬುದು. ಈ ವಿಷಯ ತಿಳಿದ ಗೌಡರು ಆತಂಕಗೊಂಡು ತಮ್ಮ ಮನೆತನದ ಮರ್ಯಾದೆ ಹಾಳಾಗದಂತೆ ನೋಡಿಕೊಳ್ಳಬೇಕೆಂದು ಬಾಳಾಚಾರ್ಯರಿಂದ ಮಾತು ತೆಗೆದುಕೊಳ್ಳುತ್ತಾನೆ. ಅಷ್ಟರ ಮಟ್ಟಿಗೆ 'ತನ್ನ ಮನೆತನದ ಬಗೆಗೆ. ಊರ ಬಗೆಗೆ ತೀವ್ರ ಅಭಿಮಾನವಿತ್ತು. ಅಂತಃಕರಣದ ಸೆಳೆಯಿತ್ತು. ಕರ್ತವ್ಯದ ಪ್ರಜ್ಞೆಯಿತ್ತು. ಹಿಂದೆ ಎಷ್ಟೆ ಅಕೃತ್ಯಗಳನ್ನು ನಡೆಸಿದರೂ ಕೂಡ ಅಭಿಮಾನದಿಂದ ಗೌಡರು ಪಾದಕ್ಕೆಯನ್ನು ತಬ್ಬಿಕೊಂಡಂತೆ ಮತ್ತಾರೂ ತಬ್ಬಿಕೊಂಡಿರಲಿಲ್ಲ. ಕೋಟೆಯಾಗಿ ಊರನ್ನು ಕಾಯುತ್ತಾ ಯಾವಾಗಲೂ ಜಾಗೃತರಾಗಿರುತ್ತಿದ್ದರು'.

ಗೌಡರಿಗೆ  ದಾದಾನ ಬಗೆಗೆ ವಿಶೇಷವಾದ ಪ್ರೀತಿ ಇತ್ತು. ನಾನಾನ ಪ್ರಕರಣಕ್ಕೆ ಸಂಬಂಧಿಸಿದಂತೆ ಬಂಧನದಲ್ಲಿದ್ದ ದಾದಾನಿಗೆ ಬಾಳೆಹಣ್ಣು ಮತ್ತು ಹಾಲು ನೀಡಿ ಸಾಂತ್ವಾನ ಹೇಳಿ ತಿಳುವಳಿಕೆಯ ಮಾತುಗಳನ್ನಾಡುತ್ತಾರೆ. ಅಮಲ್ದಾರರೆದುರು 'ದಾದಾ ಉದ್ಧಟನಿರಬಹುದು ಆದರೆ ಆತ ಒಳ್ಳೆಯವನು. ಆತನ ತಪ್ಪುಗಳೆಲ್ಲ ಸಣ್ಣವು ಎಂದು ಹೇಳಿ ಆತನನ್ನು ಕ್ಷಮಿಸಬೇಕೆಂದು ಕೇಳಿಕೊಳ್ಳುತ್ತಾರೆ. ಇಲ್ಲಿ ಗೌಡರ ಅಂತಃಕರಣವನ್ನು ಗುರುತಿಸಬಹುದು.

ಒಂದೆ ನಾನಾ ಸತ್ತಾಗ ಸುಳ್ಳು ಪಂಚನಾಮೆ ಬರೆದು ಪ್ರಕರಣವನ್ನು ಮುಚ್ಚಿಹಾಕಲು ಯತ್ನಿಸಿದ್ದ ಗೌಡರು ಅದೇ ಪುತಳಾಬಾಯಿ ಸತ್ತಾಗ "ತಲೀ ಹೋದರೂ ಖೊಟ್ಟಿ ಪಂಚನಾಮ ಬರೀ ತಕ್ಕದ್ದಲ್ಲ.......ಇನ್ನು ಮುಂದೆ ಏನಾದರೂ ಅನ್ಯಾಯ ಮಾಡಾಣಿಲ್ಲ" ಎಂದು ದೃಢ ನಿರ್ಧಾರ  ಮಾಡುತ್ತಾರೆ. ನಾನಾನ ಸಾವನ್ನು ಮುಚ್ಚಿಹಾಕಿದ್ದು ನಾವು ಮಾಡಿದ ದೊಡ್ಡ ತಪ್ಪು ಎಂಬ ಅರಿವು ಗೌಡರಿಗೆ ಆಗಿದೆ. ಅದನ್ನು ಆಚಾರ್ಯರೊಂದಿಗೆ ಹೀಗೆ ಹೇಳುತ್ತಾರೆ– "ಇದೆಲ್ಲಾ ಮನಸ್ಸಿಗೆ ಸನಮಂತ ಆಗೂ ಮಾತು ಆಚಾರೆಪ್ಪ, ದೇವರಿಗೆ ಸನಮಂತ ಆಗೂದಲ್ಲ. ನಾನಾನ ದುರ್ಮರಣ ಆದಾಗ ಅದನ್ನು ಮುಚ್ಚಿದ್ದ ದೊಡ್ಡ ತಪ್ಪು

ಆಗೇತಿ. ಊರ ಜನಾ ಬಂದು ಹೊಟ್ಟಿ ಪಂಚನಾಮಾ ಬರದ ತೀರಬೇಕು ಅಂತ ಹಟಾ ಮಾಡಲಿಲ್ಲ. ನಾವ ನಾಕು ಜನಸೇರಿ. ಊರಿನ ಮಾತು ನಮ್ಮದ ಅನ್ಯಾಪರ್ತ್ಯಾಂಗ ತೀರಿಸಿಗೊಂಡ ಬಂದಿವಿ. ಇಗಾ ಇಲ್ಲೆ ಲಕ್ಷ್ಮಣ ಆದಾನಲ್ಲ ಕೇಳರಿ ಅವಗ ನಾವು ಮಾಡಿದ ಪಂಚನಾಮೆ ಮನಸಾ ಒಪ್ಪಿಗಿಲ್ಲ. ದಾದಾನ್ನ ಕೇಳರಿ ನಾವು ಮಾಡಿದು ಅನ್ಯಾಯ ಅಂತಾನ. ಊರಾಗಿನ ಹೊಲಮಾಟಗರನ್ನ ಕೇಳರಿ ಮನಸ್ಸು ಬಿಚ್ಚಿ ಖರೇ ಮಾತು ಹೇಳಾಕಿಲ್ಲ. ನಾವು ದೊಡ್ಡವರು. ದುಡ್ಡ ತಿಂದು ದೊಡ್ಡವರು ಮಾಡಿದ ತಪ್ಪು ಮುಚ್ಚ್ಯಾರಿ ಅಂತ ತಮ್ಮ ತಮ್ಮೊಳಗೆ ಆಡಿಕೊಂತಾರ. ಬಟ ಮುಚ್ಚಿಟ್ಟರೂ ಅನ್ಯಾಯ ಬೈಲಿಗೆ ಬೀಳಾಕ ಬೇಕಲ್ಲ. ಆಗ ದೇವರ ಕಾಯಬೇಕ ನಮ್ಮನ್ನ. ಇಲದಿರಕ ಒಬ್ಬ್ಯಾರ ಪ್ರಾಣ್ಯ ಕಾಯಬೇಕು. ಅವರ ಪ್ರಾಣ್ಯ ಮನೆತನದ ಮರ್ಯಾದ್ಯಾಗ ಇರತೈತಿ. ಆದಕ ಆದನ್ನ ಕಾಯ್ಕೊಂಡು ಹೋಗರಿ ಅಂತ ನಿಮಗೆಲ್ಲ ಹೇಳಕೊಂಡದ್ದು". ಈ ಮಾತುಗಳು ಬದಲಾದ ಶಂಕರಪ್ಪಗೌಡರ ವ್ಯಕ್ತಿತ್ವವನ್ನು ಸೂಚಿಸುವುದರ ಜೊತೆಗೆ ಪಾತ್ರದ ಬೆಳವಣಿಗೆಯನ್ನು ತಿಳಿಸುತ್ತದೆ. ಪಾದಕ್ಕಿಂಯ ಗುಡ್ಡ ಮುಂದೆ ಸರಿಯಬಹುದು. ಗೌಡರು ತಮ್ಮ ನಿರ್ಧಾರದಿಂದ ಹಿಂದೆ ಸರಿಯುವುದಿಲ್ಲ ಅಷ್ಟರಮಟ್ಟಿಗಿನ ಹಠ ಅವರದು.

ಗೌಡರ ಮನೆತನಕ್ಕೆ ಮೀಸಲಾಗಿದ್ದ ದರ್ಪ. ಅಧಿಕಾರ ಎಂಬುದು ಇವರಲ್ಲಿ ಜೀವಂತ ಶಕ್ತಿಯಾಗಿತ್ತು. ಅವುಗಳ ಬಲದಿಂದ ಸಾವಿರ ಅನ್ಯಾಯಗಳಿಗೆ ಕಾರಣರಾಗಿದ್ದರು. ಇದೆಲ್ಲವು ಅಧಿಕಾರದ ಒಂದು ಭಾಗವೆಂದು ನಂಬಿದ್ದರು. ಆದರೆ ಹೊಲಗೇರಿಯ ಬಾಳ್ಯಾನ ಕುಟುಂಬದ ಸಾವು ಗೌಡರಲ್ಲಿ ತೀವ್ರವಾದ ಬದಲಾವಣೆಯನ್ನು ತರುತ್ತದೆ. ಜಾಗೀರದಾರರೊಟ್ಟಿಗೆ ಸ್ಪರ್ಧೆ ಕಟ್ಟಿ ಬಡವರಿಗೆ ಕಾಳು ಹಂಚದಿದ್ದುದು ತಾವು ಮಾಡಿದ ದೊಡ್ಡ ತಪ್ಪು ಎಂದು ಪಶ್ಚಾತ್ತಾಪದಿಂದ ಬೆಂದು ಹೋಗುತ್ತಾರೆ. ಹಿಂದೆ ಇದ್ದ ಸ್ವಾರ್ಥ, ದ್ವೇಷ ಈರ್ಷೆ ಬಣಕಟ್ಟುವ ಹಠ ಇವೆಲ್ಲವನ್ನು ತ್ಯಜಿಸುತ್ತಾರೆ. ತಮ್ಮನ್ನು ತಾವು ಸತ್ವ ಪರೀಕ್ಷೆಗೆ ಒಡ್ಡಿಕೊಳ್ಳುತ್ತಾರೆ. ಇನ್ನು ಮುಂದೆ ನ್ಯಾಯದಿಂದಲೇ ವರ್ತಿಸಬೇಕು. 'ಈ ನ್ಯಾಯ ಹಿಂದಿನ ಸಾವಿರ ಅನ್ಯಾಯಗಳನ್ನು ಬಯಲಿಗೆಳೆದರೂ ಅಡ್ಡಿಯಿಲ್ಲ. ಅನ್ಯಾಯದಿಂದ ಅನ್ಯಾಯವನ್ನು ಮುಚ್ಚಿ ಸುಖವಾಗಿ ಬದುಕಬಹುದು. ಆದರೆ ಈ ಎರಡು ಅನ್ಯಾಯಗಳ ನಡುವೆ ಒಂದು ಮನುಷ್ಯ ಜೀವ ವಿಲಿವಿಲಿ ಒದ್ದಾಡುತ್ತಿರುತ್ತದೆ. ಮನುಷ್ಯತ್ವದ ಹಸಿದ ಕರುಳೊಂದು ನೋಯುತ್ತಿರುತ್ತದೆ. ಎಷ್ಟೇ ದುಃಖವಾದರೂ ಅಡ್ಡಿಯಿಲ್ಲ. ನ್ಯಾಯದಿಂದಲೇ ವರ್ತಿಸಬೇಕು' ಎಂದು ದೃಢನಿರ್ಧಾರ ಮಾಡಿ ಪುತ್ರಳಾಬಾಯಿಯ ಶವ ಪರೀಕ್ಷೆಗಾಗಿ ದವಾಖಾನೆಗೆ ಕಳುಹಿಸಲೇಬೇಕೆಂದು ನಿರ್ಧರಿಸುತ್ತಾರೆ. ಇದರಿಂದ ಫೌಜುದಾರರ ಕೋಪಕ್ಕೆ ಗುರಿಯಾದರೂ ಅದನ್ನು ಕೂಡ ಲೆಕ್ಕಿಸುವುದಿಲ್ಲ. ಅವರ ವಿರುದ್ಧವೇ ಸೆಟೆದು ನಿಲ್ಲುತ್ತಾರೆ. ಅನ್ಯಾಯವನ್ನು ಪ್ರತಿಭಟಿಸುತ್ತಾರೆ.

ಬದಲಾದ ಗೌಡರಿಂದ ಪಾದಕ್ಕಿಯ ಸ್ಥಿತಿ ಸುಧಾರಿಸಬಹುದೇನೋ ಎಂದು ಕೊಳ್ಳುವಷ್ಟರಲ್ಲಿ  ಕಾಲರಾ ಬೇನೆ ಬಂದು ಅಡರಿಕೊಳ್ಳುತ್ತದೆ. ಅವರನ್ನು ಉಳಿಸುವ ಸಲುವಾಗಿ ಚೆನ್ನನಿಗೆ ಕೊಟ್ಟಿದ್ದ ಬೇರಿನ ಚೂರನ್ನು ತರುವಂತೆ ಗೌಡತಿ ಅಜ್ಜಿಯನ್ನು ತಡೆದು ಗೌಡರು "ಹೋಗಬ್ಯಾಡಲೇ ಮಲ್ಲಿ ನನಗೇನು ಬದುಕೋ ಆಸೆಯಿಲ್ಲ. ಸಾಯೋಕನ್ನು ಮೊದಲು. ಆ ಬಡವನ್ನ ಜೀವ ಹೊಡೆದು ತರೋ ಬೇರು ನನಗೆ ಬ್ಯಾಡ ಅದೊಂದು ಪಾಪ ಮಾಡಿ ಮತ್ತ ಯಾವ ನರಕಕ್ಕೆ ಹೋಗಲಿ" ಎಂದು ಕೂಗಿಕೊಳ್ಳುತ್ತಾರೆ. ಪಾದಕ್ಕಿಯ ಕೋಟೆಯಂತಿದ್ದ ವಜ್ರದೇಹಿಗಳಾದ ಗೌಡರು ಅಸುನೀಗುತ್ತಾರೆ. ಶಂಕರಪ್ಪಗೌಡರು ವಿಚಾರಶೀಲರಲ್ಲದಿದ್ದರೂ ಜೀವಿತದ ಕೊನೆಯ ಕ್ಷಣದಲ್ಲಿ ಅವನ ಮನೋವೃತ್ತಿಯೇ ಬದಲಾಗುತ್ತದೆ.

## ಸ್ತ್ರೀ ಪಾತ್ರಗಳು

'ಗ್ರಾಮಾಯಣ' ಕಾದಂಬರಿಯಲ್ಲಿನ ಸ್ತ್ರೀ ಪಾತ್ರಗಳ ಬಗ್ಗೆ ಹೇಳುವುದಾದರೆ ಆಗಿನ ಕಾಲದ ಸಾರ್ವಜನಿಕ ಜೀವನದಲ್ಲಿ ಹೆಣ್ಣು ಹೆಚ್ಚಿನ ಪಾತ್ರವನ್ನು ವಹಿಸುತ್ತಿರಲಿಲ್ಲ. ಹಾಗಾಗಿ ಇಲ್ಲಿನ ಪುರುಷ ಪಾತ್ರಗಳಿಗೆ ಹೋಲಿಸಿದರೆ ಸ್ತ್ರೀ ಪಾತ್ರಗಳ ಸಂಖ್ಯೆ ತೀರಾ ವಿರಳ. ಇಲ್ಲಿ ಕಂಡುಬರುವ ಸ್ತ್ರೀಯರ ವ್ಯಕ್ತಿತ್ವವೂ ಅಪೂರ್ಣವಾಗಿದೆ. ಪುರುಷಪ್ರಧಾನ ಸಮಾಜವಾದ್ದರಿಂದ ಸ್ತ್ರೀಯರಿಗೆ ಯಾವ ರೀತಿಯ ಸ್ವಾತಂತ್ರ್ಯವೂ ಇರಲಿಲ್ಲ. ಅಲ್ಲದೆ ತಮ್ಮ ಮೇಲೆ ಆಗುತ್ತಿರುವ ಶೋಷಣೆಯ ವಿರುದ್ಧ ಪ್ರತಿಭಟಿಸುವ ಗುಣ ಯಾರಲ್ಲೂ ಕಂಡು ಬರುವುದಿಲ್ಲ. ಬದಲಾಗಿ ಅದನ್ನು ಮೂಕವಾಗಿ ಅನುಭವಿಸುವುದು ಕಂಡುಬರುತ್ತದೆ. ಪುತಳಬಾಯಿ ಮತ್ತು ಬಿಮಣಾಳ ಒಂದು ಕ್ಷಣದ ಮೋಹ ಅವರನ್ನು ದುರಂತದೆಡೆಗೆ ತಳ್ಳುತ್ತದೆ. ತಮ್ಮದೇ ಆಸ್ತಿಯನ್ನು ಉಳಿಸಿಕೊಳ್ಳಲಾಗದ ಅಸಹಾಯಕರಾಗಿ ಲಕ್ಷ್ಮೀಬಾಯಿ, ಪಾರ್ವತವ್ವ ಕಂಡುಬರುತ್ತಾರೆ. ಇವರಲ್ಲದೆ ಬಾಳಾಚಾರ್ಯರ ಜೀವನದ ಪ್ರವಾಹದಲ್ಲಿ ಗುಪ್ತಗಾಮಿನಿಯಾಗಿ ಹರಿಯುವ ಅವರ ಪತ್ನಿ, ದಿಟ್ಟತನದಿಂದ ಪಡದಯ್ಯನ ವಿರುದ್ಧವಾಗಿ ಸಾಕ್ಷಿ ಹೇಳಿದ ದಾನವ್ವ, ದಾದನ ಕೋಪಕ್ಕೆ ಬಲಿಯಾಗುತ್ತಿದ್ದ ತನ್ನ ಪತಿಯನ್ನು ಉಳಿಸಿಕೊಂಡ ವೀರಸ್ತ್ರೀ ರತ್ನ, ಪರಿಚಯವೇ ಇಲ್ಲದ, ತುಂಬು ಗರ್ಭಿಣಿಯಾದ ಬಿಮಣಾಳಿಗೆ ಆಶ್ರಯವಿತ್ತು, ಮಾನವೀಯತೆ ಮೆರೆದ ಚಂದ್ರಿ, ಫೌಜದಾರನ ಕಾಮುಕತನದ ಎದುರು ಅಸಹಾಯಕಳಾಗಿ ನಿಂತ ಮಲ್ಲಿ, ನದಿಯ ದಂಡೆಯ ಮೇಲೆ ಊರ ಇತಿಹಾಸವನ್ನೆಲ್ಲ ಬಿಚ್ಚಿಡುವ ಸ್ತ್ರೀಯರು ಮೊದಲಾದ ಉಪಪಾತ್ರಗಳೂ ಕೂಡ ಸಜೀವವಾಗಿ ವರ್ಣಿಸುತ್ತವೆ.

## ಚಿಮಣಾ

'ಗ್ರಾಮಾಯಣ' ಕಾದಂಬರಿಯಲ್ಲಿ ಬರುವ ಮುಖ್ಯ ಪಾತ್ರಗಳಲ್ಲಿ ಚಿಮಣಾಳ ಪಾತ್ರವೂ ಒಂದು. ಶಿಲೇದಾರ ನಾನಾ ಮತ್ತು ರುಕುಮಾಳ ಒಬ್ಬಳೇ ಮಗಳಾದ ಈಕೆ ತಂದೆಯ ಆರೋಗ್ಯವನ್ನು ತಾಯಿಯ ಸೌಂದರ್ಯವನ್ನು ಸಹಜವಾಗಿ ಪಡೆದು ಪಾದಕ್ಕೆಯ ಹುಡುಗಿಯರಲ್ಲೇ ಅತ್ಯಂತ ಚೆಲುವೆ ಎನಿಸಿಕೊಂಡಿದ್ದಳು. ಬಡತನದಲ್ಲೂ ಅತ್ಯಂತ ಪ್ರೀತಿಯಿಂದ ಬೆಳೆಸಿದ್ದ ನಾನಾ ಆಕೆಯ ತಾಯಿ ಸತ್ತ ಮೇಲೆ ಪುತಳಾಬಾಯಿಯ ರಕ್ಷಣೆಯಲ್ಲಿ ಬಿಡುತ್ತಾನೆ. ಶ್ರೀಮಂತರ ಮನೆಯ ರಕ್ಷಣೆಗೆ ಬರುತ್ತಿದ್ದಂತೆ ಚಿಮಣಾಳ ಅತ್ಯಾಚಾರವಾಗುತ್ತದೆ. ಈ ಘಟನೆ ವೈಯಕ್ತಿಕ ವಿಚಾರವಾಗದೆ ಅದಕ್ಕೆ ಸಾರ್ವಜನಿಕ ಸ್ವರೂಪ ಬರುತ್ತದೆ. ಪಾದಕ್ಕೆಯ ದುರಂತ ಇಲ್ಲಿಂದಲೇ ಪ್ರಾರಂಭವಾಗುತ್ತದೆ. ತಾಯಿಯನ್ನು ಕಳೆದುಕೊಂಡ ಮುಗ್ಧ ಹಾಗೂ ನಿಷ್ಪಾಪಿ ತರುಣಿ ಚಿಮಣಾಳ ಅತ್ಯಾಚಾರಕ್ಕೆ ಕಾರಣನಾದ ವ್ಯಕ್ತಿಯನ್ನು ಊರ ಹಿರಿಯರು ಗುರುತಿಸಿದರೂ ಊರಿನ ಒಕ್ಕಟ್ಟನ್ನು ಕಾಯ್ದುಕೊಳ್ಳುವ ನೆಪದಲ್ಲಿ ಈ ಅಪರಾಧವನ್ನು ಮುಚ್ಚುವ ಪ್ರಯತ್ನ ನಡೆಯುತ್ತದೆ. ಮುಂದೆ ನಡೆಯುವ ನಾನಾನ ಕೊಲೆ. ಪುತಳಾಬಾಯಿಯ ಆತ್ಮಹತ್ಯೆ. ಗ್ರಾಮಾಧಿಕಾರಿಗಳ ಪರಸ್ಪರ ನಾಶ. ಪಡದಯ್ಯನ ಸೇಡಿನ ಕೃತ್ಯಗಳು. ದಾದಾನಂಥ ನಿರಪರಾಧಿಗಳ ಬಲಿ........ ಇತ್ಯಾದಿ..... ಘಟನೆಗಳಿಗೆ ಚಿಮಣಾಳ ಬಲಾತ್ಕಾರವೇ ಕಾರಣವಾಗುತ್ತದೆ.

ಚಿಮಣಾಳು ಒಮ್ಮೆ ಇಟ್ಟ ತಪ್ಪು ಹೆಜ್ಜೆ ಅವಳ ಜೀವನವನ್ನೇ ಭೀಕರವಾದ ದುರಂತದೆಡೆಗೆ ತಳ್ಳುವುದು ನಿಜಕ್ಕೂ ಆಘಾತಕಾರಿ. ತನ್ನ ತಂದೆಯ ಮರಣದಿಂದ ಹತಾಶಳಾದ ಅವಳ ಹೃದಯ ಬರಡು-ಭೂಮಿಯಾಗುತ್ತದೆ. ಮೊದಲ ಗುಟುಕಿಗೆ ಜೀವನ ಅವಳ ಪಾಲಿಗೆ ಕಹಿ ವಿಷವಾಗಿ ಪರಿಣಮಿಸುತ್ತದೆ. ತಂದೆಯ ಪ್ರೀತಿಯ ರಕ್ಷೆಯಲ್ಲಿ ನಿಶ್ಚಿಂತೆಯಿಂದ ಇದ್ದ ಮುಗ್ಧಕನ್ಯೆ ದೈವದ ಸಭೆಯೆದುರು ವಿಚಾರಣೆಗೆ ಗುರಿಯಾಗಬೇಕಾಗುತ್ತದೆ. ಅದೂ ಮಾನರಕ್ಷಣೆಗಾಗಿಯಲ್ಲ. ಮುಂದೆ ಹುಟ್ಟಬಹುದಾದ ನಿಷ್ಪಾಪ ಕೂಸಿನ ತಂದೆ ಯಾರು ಎಂಬ ಸತ್ಯವನ್ನು ಪ್ರಸ್ತಾಪಿಸುವುದಕ್ಕೆ! ಸತ್ಯವೇನೋ ಸ್ಥಾಪಿತವಾಗುತ್ತದೆ. ಆದರೆ ಆಕೆಯ ಅಂತಃಕರಣದ ಕನ್ನಡಿ ಚೂರುಚೂರಾಗಿ ಒಡೆದುಹೋಗಿತ್ತು. ತನ್ನ ರೂಪಸೌಂದರ್ಯದ ಬಗೆಗೆ ಅಭಿಮಾನ ಪಡುತ್ತಿದ್ದ ಚಿಮಣಾ. ಇಂದು ಈ ಸೌಂದರ್ಯ ಮಾಡಿದ ಅನಾಹುತವನ್ನು ನೆನೆದು ಮರುಗುತ್ತಾಳೆ. "ತನ್ನ ರೂಪ ಬಾಪೂಸಾಹೇಬನನ್ನು ಸೆಳೆದಿತ್ತು; ಪಡದಯ್ಯನ ಪ್ರವೇಶವೂ ಇದೇ ಕಾರಣಕ್ಕಾಯಿತು. ತಾನು ಕೌಮಾರ್ಯವನ್ನು ಕಳೆದುಕೊಂಡಳು. ಅದಕ್ಕಾಗಿ ನವೆನವೆದು ತಂದೆ ಪ್ರಾಣಬಿಟ್ಟ ಬಾಪೂಸಾಹೇಬನ ಮೇಲೆ ಕೊಲೆಯ ಆರೋಪ ಬಂದುಹೋಯಿತು. ಈಗ ತನ್ನ ಚೆಲುವಿಕೆ ನಡೆಸಿದ ಅನಾಹುತ ದಾದಾನ ಬಲಿಯನ್ನೂ

ಕೇಳುತ್ತಿದೆ...... ತಾನು ಜೀವಮಾನವೆಲ್ಲ ಈಕುಹುಕ ಸಮಾಜದ ಜೊತೆಯಲ್ಲಿ ಬಾಳುವೆ ಮಾಡಬೇಕು. ಯಾರಿಗೆ ಸುಖವಾಗಿದೆ ತನ್ನಿಂದ! ಅಶುಭಮುಹೂರ್ತವನ್ನು ನೋಡಿಯೇ ಹುಟ್ಟಿರಬೇಕು ತಾನು. ಚಿಮಣಾ ತನ್ನ ಜನ್ಮವನ್ನೇ ಶಪಿಸಿಕೊಂಡು ತಾಯಿಯ ಸಾವು. ತಂದೆಯ ಮರಣ. ಅಣ್ಣನ ಶಿಕ್ಷೆ. ಮುತ್ತಾಬಾಯಿಯ ಸಾವು ಇವೆಲ್ಲಕ್ಕೂ ತಾನೇ ಮೂಲ ಕಾರಣ ಎಂದುಕೊಂಡು ಸಂಕಟ ಪಡುತ್ತಾಳೆ. ಸದ್ಗುಣ. ಕನ್ಯತ್ವಗಳೆರಡು ಅವಳ ಪಾಲಿಗೆ ನಿಸರ್ಗಕೊಟ್ಟ ಬಳುವಳಿಯಾಗಿತ್ತು. ಜೀವಮಾನವನ್ನೆಲ್ಲ ಎಚ್ಚರದಿಂದಲೇ ಕಳೆಯಬೇಕಾಗುತ್ತದೆ. ಈ ಎಚ್ಚರ ಮೊದಲೇ ಇದ್ದಿದ್ದರೆ ಇಂಥ ಸ್ಥಿತಿ ತನಗೊದಗುತ್ತಿರಲಿಲ್ಲವೆಂದು ದುಃಖಿತಳಾಗುತ್ತಾಳೆ. ಆದರೂ ಎಲ್ಲೊ ಒಂದು ಕಡೆ ಆಸೆ ಜನಿಸುತ್ತದೆ. ಕೂಸು ಹುಟ್ಟಿದ ನಂತರ ಅದರ ಭಾಗ್ಯದಿಂದಲಾದರೂ ಪಡದಯ್ಯನ ಮನಸ್ಸು ಬದಲಾಗುತ್ತದೆ. ನನ್ನ ಪತಿತ ಜೀವನಕ್ಕೂ ಒಂದು ಶಾಶ್ವತ ದಾರಿ ಕಾಣುತ್ತದೆ. ಆಗ ತನ್ನ ಬದುಕು ಸರಿಯಾದೀತೆಂಬ ಆಶಾಭಾವನೆಯಿಂದಲೇ ದಿನಗಳೆಯುತ್ತಾಳೆ. ನಾನಾ ಕಾಕನ ಮಗಳಾಗಿ ಆತ್ಮಹತ್ಯೆ ಮಾಡಿಕೊಳ್ಳುವುದು ಹೇಡಿತನವೆನಿಸುತ್ತದೆ. ಬದುಕುವುದಕ್ಕೆ ಅಂಜುವುದು ಸರಿಯಲ್ಲ ಇನ್ನೊಬ್ಬರನ್ನು ಬದುಕಿಸಲಿಕ್ಕಾದರೂ ಉಳಿಯಬೇಕೆಂದು ದೃಢನಿರ್ಧಾರ ಮಾಡುತ್ತಾಳೆ.

ಚಿಮಣಾಳ ಶೀಲಭಂಗ ಕಾದಂಬರಿಯ ಪ್ರಮುಖ ಘಟನೆಯಾದಂತೆ ಪ್ರಮುಖ ಸಂಕೇತವೂ ಆಗುತ್ತದೆ. ಹೊರಗಿನಿಂದ ಬಂದಿರುವ ದುಷ್ಟ ಶಕ್ತಿಗಳೆಲ್ಲ ಚಿಮಣಾಳ ಮೂಲಕವೇ ತಮ್ಮ ಆಟವನ್ನು ನಡೆಸುತ್ತವೆ. ಚಿಮಣಾಳ ರೂಪ ಸೌಂದರ್ಯವನ್ನು ಕಾವಲಿಲ್ಲದ ಹೊಲಕ್ಕೆ ಹೋಲಿಸಿದ್ದು. ಈ ದೃಷ್ಟಿಯಿಂದ ಸಾರ್ಥಕವಾಗುತ್ತದೆ. ಚಿಮಣಾಳ ಈ ಮೂಲವಸ್ತು ಕಾದಂಬರಿಯ ಉಳಿದ ಘಟನೆಗಳಲ್ಲಿ ತರಂಗ ಕ್ರಿಯೆಯಂತೆ ಹಬ್ಬಿದೆ.

ಚಿಮಣಾ ತನ್ನ ಜೀವನದಲ್ಲಿ ಒಮ್ಮೆ ಎಡವುತ್ತಾಳೆ. ಅದೇ ಕಾರ್ಯ ಪುನರಾವರ್ತನೆಯಾಗುವುದಿಲ್ಲ. ಅವಳ ಅಸಹಾಯಕತೆಯನ್ನು ಪಡದಪ್ಪ ದಾಮೂ. ಲಿಂಗಣ್ಣ ಎಲ್ಲರೂ ದುರುಪಯೋಗಪಡಿಸಿಕೊಳ್ಳುತ್ತಾರೆ. ಅವಳ ಹಾಳಾದ ಬದುಕನ್ನು ಸರಿಪಡಿಸಲು ಯಾರೂ ಪ್ರಯತ್ನ ಮಾಡುವುದಿಲ್ಲ. ಅಣ್ಣನಾದ ದಾದಾ. ಚಿಕ್ಕಪ್ಪ ಲಕ್ಷ್ಮಣನಿಗೆ ಆಕೆಯ ಸ್ಥಿತಿಗೆ ಬಗೆಗೆ ಕನಿಕರವಿದೆಯೇ ಹೊರತು ಅವಳಿಗಾದ ಅನ್ಯಾಯವನ್ನು ಸರಿಪಡಿಸುವಲ್ಲಿ ಯಾವುದೇ ದಿಟ್ಟವಾದ ಹೆಜ್ಜೆಯನ್ನಿಡುವುದಿಲ್ಲ. ಚಿಮಣಾಳನ್ನು ಮಠಕ್ಕೆ ತಂದುಬಿಡುವುದರಿಂದ ಆಕೆಯ ಸಮಸ್ಯೆ ಪರಿಹಾರವಾಗುವುದಿಲ್ಲ. ಯಶವಂತರಾಯರಲ್ಲಿ ಕಂಡು ಬರುವ ಅನುಕಂಪ. ಔದಾರ್ಯ. ತಿಳುವಳಿಕೆಯ ಗುಣವನ್ನು ದಾದಾನಲ್ಲಿ ನಾವು ಅಪೇಕ್ಷಿಸಲಾಗದು. ಚಿಮಣಾಳ ದುಃಖದ ಕಲ್ಪನೆಯು ದಾದಾನಲ್ಲಿ ಇದ್ದಂತೆ ಕಾಣುವುದಿಲ್ಲ.

ಜಮುಣಾ ಜಾರಿದ ಹೆಣ್ಣಾದರು ಅವಳಲ್ಲಿ ಪ್ರಾಮಾಣಿಕತೆ. ಸತ್ಯ ನಿಷ್ಠೆ ಇದೆ. ತಾನು ಮಾಡಿದ ತಪ್ಪಿನ ಬಗೆಗೆ ಪಶ್ಚಾತ್ತಪಪಿದೆ. ಪಡದಪ್ಪನಿಂದ ವಂಚಿತಳಾದ ಈಕೆ ತನ್ನ ಅಣ್ಣ ಅಥವಾ ಚಿಕ್ಕಪ್ಪನ ಬಳಿ ಇರಬಹುದಾಗಿತ್ತು. ಅಥವಾ ಯಶವಂತರಾಯರು 'ಕೂಸಿನ ತಂದೆ ಬಾಪು ಸಾಹೇಬ ಎಂದು ಹೇಳಿದರೂ ಅವರ ಹೆಸರನ್ನೇ ಹಚ್ಚುತ್ತೇನೆ. ಜೊತೆಗೆ ಆತನೊಂದಿಗೆ ವಿವಾಹ ಮಾಡಿಸುತ್ತೇನೆಂದಾಗಲೂ ಆಕೆ ಒಪ್ಪುವುದಿಲ್ಲ. ಯಶವಂತರಾಯರ ಮನೆಯಲ್ಲೇ ಮಗಳಂತೆ ಇರಲೂ ಒಪ್ಪುವುದಿಲ್ಲ ಲಿಂಗಪ್ಪ ಆಕೆಯನ್ನು ಬಯಸಿ ಹೊಸದೊಂದು ಬಾಳು ಕೊಡುತ್ತೇನೆಂದಾಗಲೂ ಅದಕ್ಕೂ ಆಸಕ್ತಿ ತೋರುವುದಿಲ್ಲ: ಹೀಗೆ ತನ್ನ ಬಾಳನ್ನು ಸರಿಪಡಿಸಿಕೊಳ್ಳಲು ಅನೇಕ ಅವಕಾಶಗಳಿದ್ದಾಗ್ಯೂ ಆಕೆ ಅದೆಲ್ಲಕ್ಕೂ ನಿರ್ಲಿಪ್ತಳಾಗಿ ವರ್ತಿಸುತ್ತಾಳೆ. ಆಕೆಗೆ ಯಾವುದು ಸರಿ. ಯಾವುದು ತಪ್ಪು ಎಂದು ವಿವೇಚಿಸುವ. ಮಾನಸಿಕ ತೊಡಕನ್ನು ಬಿಡಿಸುವಷ್ಟು ತ್ರಾಣವಿರಲಿಲ್ಲ. ಪ್ರತಿ ಕ್ಷಣಕ್ಕೂ ಮಾಡಿದ ಪಾಪವೆಲ್ಲ ಇತಿಹಾಸವಾಗಿ ಅವಳ ದುಃಖವನ್ನು ಹೆಚ್ಚಿಸುತ್ತವೆ. ಒರತೆಯ ನೀರಿನಂತೆ ಆಕೆಯ ದುಃಖ ಅಕ್ಷಯವಾಗಿತ್ತು.

ಪಡದಪ್ಪ ಜಮುಣಾಳ ಅತ್ಯಾಚಾರ ಮಾಡಿದ್ದಲ್ಲದೆ. ತನ್ನ ಮಠದಲ್ಲಿಯೇ ಇದ್ದ ತುಂಬು ಗರ್ಭಿಣಿಯಾದ ಆಕೆಯನ್ನು ನಿರ್ಗತಿಕಳನ್ನಾಗಿ ಬಿಟ್ಟು ಹೋಗುತ್ತಾನೆ. ಹೀಗೆ ಎರಡು ಬಾರಿ ವಂಚಿಸಿ ಮೋಸ ಮಾಡಿದ ಪಡದಪ್ಪನೊಂದಿಗೆ ಮತ್ತೆ ಮಠಕ್ಕೆ ಪ್ರವೇಶಿಸುವುದರ ಹಿಂದಿನ ಉದ್ದೇಶವೇನು? ಆಕೆಯ ಮಾನಸಿಕ ತಳಮಳ ಭಾವನೆಗಳೇನು ಎಂಬುದು ದೊಡ್ಡ ಪ್ರಶ್ನೆಯಾಗಿ ನಿಲ್ಲುತ್ತದೆ. ತನ್ನ ಬಾಳು ಎಂದೋ ದೈವ-ದುರ್ವಿಲಾಸಕ್ಕೆ ಆಹುತಿಯಾಗಿದೆ. ಅನುಭವನ್ನು ಸೆರಗಿನಲ್ಲಿ ಕಟ್ಟಿಕೊಂಡೇ ಹುಟ್ಟಿದ ತಾನು ಬಾಳುವೆಯುದ್ದ ಅದನ್ನೇ ಬಿಚ್ಚಿ ಉಣ್ಣಬೇಕೆಂದುಕೊಳ್ಳುತ್ತಾಳೆ. ಒಡೆದು ಚೂರಾದ ಅಂತರಂಗದ ಕನ್ನಡಿಯನ್ನು ಒಂದುಗೂಡಿಸುವುದರಿಂದ ಪ್ರಯೋಜನವಿಲ್ಲವೆಂದರಿತ ಜಮುಣಾ ವಿಚಾರ ಮಾಡಿಯೇ ಮತ್ತೆ ಪಡದಪ್ಪನೊಂದಿಗಿನ ಭೀಕರ ಪ್ರಪಂಚಕ್ಕೆ ಕಾಲಿರಿಸಿದ್ದಾಳೆನಿಸುತ್ತದೆ. ಜೀವನದಲ್ಲಿ ರೋಸಿ ಹೋಗಿ ಒಂದು ರೀತಿಯ ವಿರಕ್ತ ಜೀವನವನ್ನು ಆಯ್ಕೆ ಮಾಡಿಕೊಂಡಿರುತ್ತಾಳೆ. ಈಕೆಯಲ್ಲಿನ ನಿರ್ಲಿಪ್ತತೆ. ವಿರಕ್ತ ಜೀವನವನ್ನು ನಡೆಸಬೇಕಿದ್ದ ಸನ್ಯಾಸಿಯಾದ ಪಡದಪ್ಪನನ್ನು ಅಣಕಿಸುವಂತಿತ್ತು.

ಜಮುಣಾ ಮಿತಭಾಷಿ. ಕಾದಂಬರಿಯಲ್ಲಿ ಆಕೆ ಮಾತಾಡುವುದು ತುಂಬಾ ಕಡಿಮೆ. ಆಕೆ ಯಶವಂತರಾಯರ ಮನೆಯಲ್ಲಿದ್ದಾಗಾಗಲೀ. ಮಠದಲ್ಲಿದ್ದಾಗಾಗಲಿ. ಮಗುವಿನೊಂದಿಗಿನ ಸಂಬಂಧ ಎಂತಹದ್ದು ಎಂಬುದರ ಚಿತ್ರಣ ನಮಗೆ ಸಿಗುವುದಿಲ್ಲ. ನೋವು-ನಲಿವು ಯಾವುದಕ್ಕೂ ಸ್ಪಂದಿಸದೆ ಒಂದು ರೀತಿಯ ನಿರ್ಲಿಪ್ತಳಾಗಿ. ಜೀವಂತ ಶವದ ಹಾಗೆ ಇರುತ್ತಾಳೆ. ಪಡದಪ್ಪ ತನ್ನ ಪಾಪದ ಹೊರೆಯನ್ನು ಲಿಂಗಪ್ಪನ ಮೇಲೆ ಹೊರಿಸುತ್ತಾನೆ.

ಲಿಂಗಪ್ಪ ಚಿಮಣಾಳನ್ನು ಆಸೆ ಪಡುತ್ತಾನೆ. ತಾವಿಬ್ಬರು ಮುಂದೆ ಒಟ್ಟಿಗೆ ಜೀವಿಸುತ್ತೇವೆಂದು ಎಲ್ಲರೆದುರು ಒಪ್ಪಿಕೊಳ್ಳುತ್ತಾನೆ. ಆದರೆ ಈ ಮಾತು ಚಿಮಣಾಳಲ್ಲಿ ಆತಂಕ ಉಂಟು ಮಾಡುತ್ತದೆ. ಕಾಮ ಅವಳ ಪಾಲಿಗೆ ಚಿಕ್ಕಂದಿನಲ್ಲೇ ದೃಷ್ಟಿ ತಾಕಿದ ಕೂಸಾಗಿತ್ತು. ಅದನ್ನು ನೆನೆದರೆ ಓಕರಿಗೆ ಬರುವಂತಿತ್ತು. ಈಗ ಲಿಂಗಪ್ಪನನ್ನು ನೋಡಿದಾಗಲೂ ಅದೇ ಭಾವನೆ ಅವಳಲ್ಲಿ ಮೂಡುತ್ತದೆ. ಲೋಕದ ಕಣ್ಣಿಗೆ ಅವಳ ರೂಪ ಕಾವಲಿಲ್ಲದ ಹೊಲದ ಬೆಳೆಯಾಗಿತ್ತು. ಪಡದಪ್ಪ ಮಠವನ್ನು ಬಿಟ್ಟುಹೋದ ಬಳಿಕ ಲಿಂಗಪ್ಪನ ಆಸೆಗಳು ಗಿಡುಗನಂತೆ ಅವಳ ಸುತ್ತಲೂ ಹಾರಾಡುತ್ತಿತ್ತು. ಚಿಮಣಾಳನ್ನು ಪಡೆದೇ ತೀರಬೇಕೆಂಬ ಹಠದಿಂದ ಒಂದೇ ಸಮನೆ ಬಾಗಿಲು ಬಡಿಯುತ್ತಾನೆ. ಒಮ್ಮೆ ಶೀಲವನ್ನು ಕಳೆದುಕೊಂಡ ಅವಳಿಗೆ ಪ್ರತಿಭಟಿಸಲೂ ಕೂಡ ಸ್ವಾತಂತ್ರ್ಯವಿರಲಿಲ್ಲ. ಇಟ್ಟ ಒಂದೇ ಒಂದು ತಪ್ಪು ಹೆಜ್ಜೆ ಸಂಪೂರ್ಣವಾಗಿ ತಪ್ಪುದಾರಿಗೆಳೆದಿತ್ತು. ಅಲ್ಲಿಂದ ಹಿಂದಿರುಗುವುದೂ ಸಾಧ್ಯವಿರಲಿಲ್ಲ. ಲಿಂಗಪ್ಪನನ್ನು ಒಪ್ಪುವುದೂ ಸಾಧ್ಯವಿಲ್ಲ. ಹೀಗೆ ಮದುವೆಯಾಗಬೇಕೆಂದು ಹಠ ಹೂಡಿ ಎಲ್ಲ ದಾರಿಗಳನ್ನು ಮುಚ್ಚಿತ್ತು. ಅದೂವರೆಗೂ ಯಾರ ಸಹಾಯವನ್ನು ಪಡೆಯದ, ಯಾವ ನಿರ್ಧಾರವನ್ನು ತೆಗೆದುಕೊಳ್ಳದಿದ್ದ ಚಿಮಣಾ ಕೊನೆಗೊಮ್ಮೆ ಬದುಕುವ ಆಸೆಯನ್ನು ತ್ಯಜಿಸಿ ತನ್ನನ್ನು ತಾನೇ ಬೆಂಕಿಗೆ ಆಹುತಿ ಮಾಡಿಕೊಳ್ಳುವುದರ ಮೂಲಕ ಘೋರ ದುರಂತಕ್ಕೆ ಗುರಿಯಾಗುತ್ತಾಳೆ. ಪ್ರಾರಂಭದಿಂದ ಕೊನೆಯವರೆಗೂ ತನಗಾದ ಅನ್ಯಾಯದ ವಿರುದ್ಧ ಎಲ್ಲಿಯೂ ಪ್ರತಿಭಟಿಸುವುದಿಲ್ಲ.

## ಪಾತ್ರಗಳ ವ್ಯಕ್ತಿತ್ವದ ವೈರುಧ್ಯಗಳು

‘ಗ್ರಾಮಾಯಣ’ ಕಾದಂಬರಿಯಲ್ಲಿ ಬರುವ ಪಾತ್ರಗಳನ್ನು ಗಮನಿಸಿದಾಗ ಕೆಲವು ಪಾತ್ರಗಳ ವ್ಯಕ್ತಿತ್ವದಲ್ಲಿ ವೈರುಧ್ಯತೆಯನ್ನು ಗುರುತಿಸಬಹುದು. ಒಂದೇ ರೀತಿಯ ಸಮಸ್ಯೆಗೆ ಒಳಗಾದ ಎರಡು ಪಾತ್ರಗಳು ಆ ಸಮಸ್ಯೆಯನ್ನು ಹೇಗೆ ನಿಭಾಯಿಸುತ್ತವೆ. ತಮಗೊದಗಿದ ಪ್ರತಿಕೂಲ ಪರಿಸ್ಥಿತಿಗೆ ಹೇಗೆ ತೆರೆದುಕೊಳ್ಳುತ್ತವೆಂಬುದನ್ನು ನೋಡಿದಾಗ ಆ ಪಾತ್ರಗಳ ವ್ಯಕ್ತಿತ್ವದಲ್ಲಿ ಕಂಡುಬರುವ ಸಾದೃಶ್ಯ, ವೈರುಧ್ಯಗಳನ್ನು ಗುರುತಿಸಬಹುದು.

ಪ್ರಸ್ತುತ ಈ ವಿಚಾರಕ್ಕೆ ಸಂಬಂಧಿಸಿದಂತೆ ಬಾಪು ಸಾಹೇಬ ಮತ್ತು ಲಿಂಗಪ್ಪ; ಲಕ್ಷ್ಮಿಬಾಯಿ ಮತ್ತು ಪಾರ್ವತವ್ವ; ಪುತಳಾಬಾಯಿ ಮತ್ತು ಚಿಮಣಾ–ಈ ಮೂರು ಜೋಡಿಗಳ ವ್ಯಕ್ತಿತ್ವವನ್ನು ಮಾತ್ರ ಇಲ್ಲಿ ಚರ್ಚಿಸಲಾಗಿದೆ.

### ಬಾಪೂಸಾಹೇಬ ಮತ್ತು ಲಿಂಗಪ್ಪಗೌಡ

ಈ ಇಬ್ಬರೂ ವ್ಯಕ್ತಿಗಳು ಮೂಲತಃ ಪಾದಳ್ಳಿಯವರಾಗಿರದೆ ಹೊರಗಿನಿಂದ ಬಂದವರು. ಬಾಪೂಸಾಹೇಬ ಕನಕೇರಿಯಗೌಡನಾಗಿದ್ದು, ಪುತಳಾಬಾಯಿಯ ತಮ್ಮನಾದ್ದರಿಂದ

ಆಕೆಯೊಂದಿಗೆ ಪಾದಳ್ಳಿಗೆ ಆಗಮಿಸುತ್ತಾನೆ. ಲಿಂಗಪ್ಪ ಅಜರಾಣಿಯ ಕುರುಬ ಶಂಕರಪ್ಪನ ಮಗನಾಗಿದ್ದು, ನಾಮಸಾದೃಶ್ಯದಿಂದ ಮತ್ತು ಆತನ ತಾಯಿ ಪಾದಳ್ಳಿಯ ಗೌಡರಾದ ಶಂಕರಪ್ಪನ ಹಿರಿಯ ಹೆಂಡತಿಯಾಗಿದ್ದಳೆಂಬ ಕಾರಣ ಒಡ್ಡಿ ಗೌಡರ ವಾರಸುದಾರನಾಗುವ ಹಂಬಲದಿಂದ ಪಾದಳ್ಳಿಗೆ ಬರುತ್ತಾನೆ. ಇಬ್ಬರೂ ತಮ್ಮದಲ್ಲದ ಆಸ್ತಿಯನ್ನು ಕಬಳಿಸಿ ಪಾದಳ್ಳಿಯಲ್ಲಿ ಭದ್ರವಾಗಿ ನೆಲೆಯೂರಬೇಕೆಂಬ ಮಹತ್ವಾಕಾಂಕ್ಷೆಯುಳ್ಳವರು. ಪಾದಳ್ಳಿಗೆ ಕಂಟಕ ಪ್ರಾಯರಾದ ಇವರು ಬಿರೇಮಠದ ಪಡಂಬ್ಯನ ಆಪ್ತರಾಗಿದ್ದು, ಅವರಾಡಿಸುವ ಸೂತ್ರದ ಗೊಂಬೆಗಳಂತೆ ವರ್ತಿಸುತ್ತಾರೆ. ಇಬ್ಬರಲ್ಲೂ ಸ್ವಂತ ಬುದ್ಧಿಯಾಗಲಿ ತಮ್ಮ ನಡವಳಿಕೆಯ ಬಗೆಗೆ ವಿವೇಚನಾಶಕ್ತಿಯಾಗಲೀ ಇಲ್ಲ. ಇವರುಗಳ ಸ್ವಾರ್ಥ, ಅಧಿಕಾರಲಾಲಸೆ, ಈರ್ಷ್ಯೆ, ದ್ವೇಷಗಳು ಪಾದಳ್ಳಿಯ ಜನಜೀವನ ಮೂರಾಬಟ್ಟೆಯಾಗಲು ಕಾರಣವಾಗುತ್ತದೆ.

ಬಾಪುಸಾಹೇಬ ವಾಡೆಯ ಆಸ್ತಿ ಮತ್ತು ಅಧಿಕಾರಕ್ಕೆ ಆಸೆಪಟ್ಟರೆ, ಲಿಂಗಪ್ಪ ಗೌಡರ ಆಸ್ತಿ ಮತ್ತು ಮನೆತನಕ್ಕೆ ಆಸೆ ಪಡುತ್ತಾನೆ. ಮುತಳಾಬಾಯಿಯೊಟ್ಟಿಗೆ ವಾಡೆಗೆ ಬಂದ ಬಾಪು ಆಕೆಯ ಪ್ರತಿನಿಧಿಯಾಗಿ ಅಧಿಕಾರ ನಡೆಸುತ್ತಿದ್ದವನು ಜಾಗೀರಿನ ಹಕ್ಕುಬಾಧ್ಯತೆಗಳೆಲ್ಲ ತನಗೇ ಮೀಸಲೆಂದು ದರ್ಪದಿಂದ ವರ್ತಿಸತೊಡಗುತ್ತಾನೆ. ಬಾಲ್ಯದಿಂದಲೂ ವಿಲಾಸ ಜೀವನಕ್ಕೆ ಅಂಟಿಕೊಂಡ ಈತನಿಗೆ ವಾಡೆಯ ಅಧಿಕಾರ, ಸಂಪತ್ತು ಅನಾಯಾಸವಾಗಿ ಲಭ್ಯವಾಗಿ ಆತನ ಭೋಗ ಜೀವನಕ್ಕೆ ಮತ್ತಷ್ಟು ಅನುವುಮಾಡಿಕೊಟ್ಟಂತಾಗುತ್ತದೆ. ನಾನಾನ ಸಾವಿನಲ್ಲಿ ತನ್ನ ಪಾತ್ರವಿಲ್ಲದಿದ್ದರೂ ಅದನ್ನು ಸಮರ್ಥಿಸಲಾಗದೆ ದಂಡತೆರುತ್ತಾನೆ. ಗೌಡರ ಹಗೆಗಳನ್ನು ಲೂಟಿ ಮಾಡುವ ಸಂಚುರೂಪಿಸುವಲ್ಲಿ, ಗೌಡರಿಗೆ ಪ್ರತಿಸ್ಪರ್ಧಿಯಾಗಿ ಜನರಿಗೆ ಮುಗ್ಗಿದ ಕಾಳು ಹಂಚಿದ್ದು, ಮೊದಲಾದ ವಾಡೆಯ ಮನೆತನಕ್ಕೆ ಕಳಂಕ ಹಚ್ಚುವ ನೀಚ ಕೃತ್ಯಗಳಲ್ಲಿ ಭಾಗಿಯಾಗುತ್ತಾನೆ.

ಅದೇ ರೀತಿ ಪಡದಪ್ಪ ಮತ್ತು ಕುಲಕರ್ಣಿ ಶೇಷಪ್ಪನ ಸಹಾಯದಿಂದ ಪಾದಳ್ಳಿಗೆ ಬಂದ ಲಿಂಗಪ್ಪ, ಗೌಡರ ವಾರಸುದಾರಿಕೆಯನ್ನು ಪಡೆಯಲು ಪ್ರಯತ್ನಿಸುತ್ತಾನೆ. ಬಾಪುವಿನಿಂದ ಲಂಚತಿಂದ ಶೇಷಪ್ಪ ಗೌಡರ ವಾರಸುದಾರ ಲಿಂಗಪ್ಪ ಎಂದು ನಮೂದಿಸಿದ್ದು, ಪಾರ್ವತವ್ವ ಕೊಟ್ಟ ಅರ್ಜಿಯನ್ನು ವಜಾಮಾಡಿ ಲಿಂಗಪ್ಪನ ಪರವಾಗಿ ಆದೇಶ ಹೊರಡಿಸಿದ್ದು, ಇವೆಲ್ಲಕ್ಕಿಂತ ಮುಖ್ಯವಾಗಿ ಗಿಬ್ಸನ್ ಸಾಹೇಬರ ತೀರ್ಪು ಇವೆಲ್ಲವೂ ಅನಾಯಾಸವಾಗಿ ಗೌಡರ ಹಕ್ಕುಬಾದ್ಯತೆಗಳನ್ನು ಲಿಂಗಪ್ಪನಿಗೆ ಕೊಡಿಸುತ್ತವೆ. ಈತನೂ ಕೂಡ ತನ್ನ ಹಕ್ಕು ಪ್ರತಿಪಾದಿಸುತ್ತ ಗೌಡರ ಹೊಲದಲ್ಲಿ ಬೆಳೆದ ಬೆಳೆಯನ್ನು ಲೂಟಿ ಮಾಡುವಲ್ಲಿ, ಗೌಡರ ಬಿತ್ತಿದ ಹೊಲವನ್ನು ವಶಪಡಿಸುವ ಕಾರ್ಯದಲ್ಲಿ ಮುಂದಾಗುತ್ತಾನೆ. ಈತನ ಈ ಕಾರ್ಯಗಳು ಗೌಡರ ಮನೆತನಕ್ಕಿದ್ದ ಮರ್ಯಾದೆಯನ್ನು ಹಾಳುಮಾಡುತ್ತವೆ. ಇಬ್ಬರಲ್ಲೂ ಪಾದಳ್ಳಿಯ ಆಸ್ತಿಯ ಮೋಹವಿತ್ತೆ ಹೊರತು ಊರ ಅಭಿಮಾನವಾಗಲಿ, ಮನೆತನದ ಮಾನರಕ್ಷಣೆಯ ಕಾಳಜಿಯಾಗಲಿ ಕಿಂಚಿತ್ತೂ ಇರಲಿಲ್ಲ.

ಚಿಮಣಾಳ ವಿಷಯದಲ್ಲಿ ಇಬ್ಬರೂ ಅಪರಾಧಿ ಸ್ಥಾನದಲ್ಲಿ ನಿಲ್ಲುತ್ತಾರೆ. ಚಿಮಣಾಳ ದುರಂತ ಬದುಕಿಗೆ ಬಾಪುಸಾಹೇಬ ನಾಂದಿಹಾಡಿದರೆ ಲಿಂಗಪ್ಪ ಅಂತ್ಯಹಾಡುತ್ತಾನೆ. ಪುತಳಾಬಾಯಿಯ ರಕ್ಷಣೆಯಲ್ಲಿದ್ದ ಚಿಮಣಾಳನ್ನು ಆಸೆಪಟ್ಟ ಬಾಪು ಆಕೆಯನ್ನು ಪಡೆಯಲು ವಿಫಲನಾಗಿ ಪಡದಯ್ಯನಿಂದ ಆಕೆಯ ಅತ್ಯಾಚಾರವಾಗಲು ಕಾರಣನಾಗುತ್ತಾನೆ. ಈ ವಿಷಯ ಗೊತ್ತಿದ್ದರೂ ಕೂಡ ಏನೂ ಮಾಡಲಾಗದ ಅಸಹಾಯಕನಾಗುತ್ತಾನೆ. ಚಿಮಣಾಳ ಪ್ರಸಂಗದಲ್ಲಿ ಈತ ನಿಮಿತ್ತಮಾತ್ರನಾಗಿದ್ದನೇ ಹೊರತು ಪ್ರತ್ಯಕ್ಷವಾಗಿ ಯಾವ ಸಂಬಂಧವೂ ಇರಲಿಲ್ಲ. ಆದರೂ ಎಲ್ಲರ ದೃಷ್ಟಿಯಲ್ಲಿ ಅಪರಾಧಿಯ ಸ್ಥಾನದಲ್ಲಿ ನಿಲ್ಲುತ್ತಾನೆ. ಚಿಮಣಾ ಈತನ ಪಾಲಿಗೆ ಜೀವಂತ ಶಾಪವಾಗಿ ಬೆನ್ನು ಹತ್ತಿರುತ್ತಾಳೆ. ಅದೇ ರೀತಿ ಮಠದಲ್ಲಿದ್ದ ಚಿಮಣಾಳ ರೂಪ ಸೌಂದರ್ಯ ಮತ್ತು ಆಕೆ ಹಿಂದೊಮ್ಮೆ ಬಾಪುವಿನ ಪ್ರೇಯಸಿಯಾಗಿದ್ದವಳು. ಪಡದಯ್ಯನಿಂದ ಕೌಮಾರ್ಯಭಂಗಕ್ಕೊಳಗಾದವಳು ಎಂಬ ಅಂಶ ಲಿಂಗಪ್ಪನಲ್ಲೂ ಆಸೆಯನ್ನು ಹುಟ್ಟಿಸುತ್ತದೆ. ಪಡದಪ್ಪ ಊರಿನವರೆದುರು ಹೇಳಿದ ಮಾತು ಆತನ ಆಸೆಯನ್ನು ಮತ್ತಷ್ಟು ಬಲಗೊಳಿಸುತ್ತದೆ. ಲಿಂಗಪ್ಪನ ಮನಸ್ಸಿನಲ್ಲಿ ಮಲಗಿದ ಹಾವಿನಂತೆ ಸುಪ್ತವಾಗಿದ್ದ ಆಸೆ ಹೆಡೆ ಬಿಚ್ಚಲಾರಂಭಿಸುತ್ತದೆ. ಹೇಗೂ ಯಾರಿಗೋ ಸುಳ್ಳು ಮಗನಾಗಿ ಬಂದು ಇನ್ನೊಬ್ಬರ ಆಸ್ತಿಯನ್ನು ಸಹಜವಾಗಿ ಪಡೆದುಕೊಂಡಿದ್ದ, ಲಿಂಗಪ್ಪ ಈಗ ಯಾರಿಗೋ ಸುಳ್ಳುಗಂಡನಾಗಿ ಹೆಣ್ಣನ್ನು ಪಡೆಯಲು ಮುಂದಾಗುತ್ತಾನೆ. ಇದಕ್ಕೆ ಒಪ್ಪದ ಚಿಮಣಾ ತನ್ನನ್ನು ತಾನೇ ಬೆಂಕಿಗೆ ಆಹುತಿ ಮಾಡಿಕೊಳ್ಳುತ್ತಾಳೆ. ಒಟ್ಟಾರೆ ಚಿಮಣಾ ಇಬ್ಬರನ್ನು ಕಾಡುವ ಹೆಣ್ಣಾಗಿದ್ದಾಳೆ.

ಬಾಪುಸಾಹೇಬ ಮತ್ತು ಲಿಂಗಪ್ಪಗೌಡ ಇಬ್ಬರಿಗೂ ಕೆಲವೊಮ್ಮೆ ಪಡದಯ್ಯನ ಕೈಗೊಂಬೆಯಾಗಿರುವುದನ್ನು ಬಿಟ್ಟು ತಾವೇ ಸ್ವತಂತ್ರ್ಯವಾಗಿ ಯೋಚಿಸುವ, ಅಧಿಕಾರಚಲಾಯಿಸುವ ಸಾಮರ್ಥ್ಯವನ್ನು ಬೆಳೆಸಿಕೊಳ್ಳಬೇಕೆಂದು, ಆತನೊಂದಿಗಿನ ಸ್ನೇಹ ಒಳಿತಲ್ಲವೆಂದು ಅನಿಸುತ್ತದೆ. ಆದರೂ ಕೂಡ ಆತನ ಸ್ನೇಹವನ್ನು ಬಿಟ್ಟಿರಲಾರರು. ಆತನಿಲ್ಲದೆ ತಮಗೆ ಗತಿಯೇ ಇಲ್ಲವೆಂಬ ಭಾವನೆ ಇಬ್ಬರಲ್ಲೂ ಇದೆ. ಹಾಗಾಗಿ ಆತನು ಮಾಡುವ ನೀಚ ಕೃತ್ಯಗಳಲ್ಲಿ ತಾವು ಭಾಗಿಯಾಗುವುದಲ್ಲದೆ ಆತನ ಪರವಾಗಿ ವಾದಿಸುತ್ತಾರೆ.

ಇಷ್ಟೆಲ್ಲ ನೀಚಕಾರ್ಯಗಳಿಗೆ ಕಾರಣೀಭೂತರಾದ ಬಾಪುಸಾಹೇಬ ಕೊನೆಗೆ ಪಾದಕ್ಷೆಯನ್ನು ತ್ಯಜಿಸುವುದಲ್ಲದೆ ಇಂದುಪುರಕ್ಕೆ ಹೋಗಿ ಲಕ್ಷ್ಮೀಬಾಯಿಯ ಕ್ಷಮಾಪಣೆ ಕೇಳಿಕೊಳ್ಳುತ್ತಾನೆ. ಇದು ಆತನ ಬದಲಾದ ವ್ಯಕ್ತಿತ್ವವನ್ನು ಸೂಚಿಸುತ್ತದೆ. ಆದರೆ ಲಿಂಗಪ್ಪಗೌಡ ತನ್ನ ದುರಾಸೆಯಿಂದ ಹುಚ್ಚನಾಗಿ ಅಲೆದು ಕೊನೆಗೆ ಬೆಂಕಿಗೆ ಆಹುತಿಯಾಗುತ್ತಾನೆ. ಚಿಮಣಾಳ ಸಾವಿಗೆ ಕಾರಣನಾದ ತಪ್ಪಿಗೆ ವಿಧಿಸಿದ ಶಿಕ್ಷೆ ಇದಾಗಿದೆ. ಒಟ್ಟಾರೆ ಲಿಂಗಪ್ಪ

ಈ ಕಾದಂಬರಿಯಲ್ಲಿ ಹರಕೆಯ ಕುರಿಯಾಗಿ ಕಂಡು ಬರುತ್ತಾನೆ.

ತಮ್ಮದಲ್ಲದ ವಸ್ತುವಿಗೆ ಆಸೆಪಡುವುದು ತಪ್ಪು. 'ಅತಿಯಾಸೆ ಗತಿಗೇಡು' ಎಂಬ ಮಾತು ಇಲ್ಲಿ ನಿಜವಾಗಿದೆ. ಜೊತೆಗೆ ವ್ಯಕ್ತಿಯಲ್ಲಿ ತನ್ನತನ ಇಲ್ಲದಿದ್ದಾಗ ಯಾವುದು ಒಳ್ಳೆಯದು. ಯಾವುದು ಕೆಟ್ಟದ್ದು ಎಂಬ ವಿವೇಚನಾಶಕ್ತಿಯೇ ಹಾಳಾಗುತ್ತದೆಂಬುದನ್ನು ಈ ಎರಡೂ ಪಾತ್ರಗಳಲ್ಲೂ ಕಾಣಬಹುದು.

## ಪುತಳಾಬಾಯಿ ಮತ್ತು ಚಿಮಣಾ

ಕಾದಂಬರಿಯಲ್ಲಿ ಬರುವ ಕೆಲವೇ ಸ್ತ್ರೀ ಪಾತ್ರಗಳಲ್ಲಿ ಇವರಿಬ್ಬರು ಒಂದೆಡೆ ನಿಲ್ಲುವ ಪಾತ್ರಗಳಾಗಿವೆ. ಒಂದು ಕ್ಷಣದ ಮೋಹ ಇಬ್ಬರನ್ನೂ ದುರಂತದೆಡೆಗೆ ತಳ್ಳುತ್ತದೆ. ಈ ಎರಡೂ ಪಾತ್ರಗಳು ಕಾದಂಬರಿಯ ಕಟ್ಟುಗಳನ್ನು ಮೀರಿ ಜೀವಂತವಾಗಿದೆ. ಪಾದಕ್ಕೆಯ ದುರಂತವು ಇವರಿಬ್ಬರ ಜೀವನದೊಟ್ಟಿಗೆ ಬೆಸೆದುಕೊಂಡಿದೆ. ವೈಯಕ್ತಿಕತೆಯ ಅಂಶಗಳು ತೀರಾ ಮಸಕಾಗಿರುವ ಕಾದಂಬರಿಯಲ್ಲಿ ಈ ಪಾತ್ರಗಳು ತಮ್ಮ ವೈಯಕ್ತಿಕತೆಯನ್ನು ಅಲ್ಲಲ್ಲಿ ತೆರೆದಿಡುತ್ತವೆ. ಪುತಳಾಳ ಪಾತ್ರ ಚಿಕ್ಕದಾದರೂ ಮಹತ್ವದ್ದಾಗಿದೆ. ಅನೈತಿಕ ಸಂಬಂಧ ಪಾಪ ಎಂಬ ಅಂಶವನ್ನು ಈ ಎರಡು ಪಾತ್ರಗಳು ಧ್ವನಿಸುತ್ತವೆ.

ಘೋರಪಡೆ ರಾಣೋಜಿರಾಯರ ಕಿರಿಯ ಹೆಂಡತಿಯಾದ ಪುತಳಾಬಾಯಿ ಶಿಲೇದಾರ ನಾನಾನ ರೂಪ ಸೌಂದರ್ಯಕ್ಕೆ ಮಾರುಹೋಗುತ್ತಾಳೆ. ತಾನು ಮತ್ತೊಬ್ಬನ ಪತ್ನಿಯಾಗಿದ್ದರು. ಪರಪುರುಷನಿಗೆ ಸೋತು ಆತನೊಂದಿಗೆ ಸಂಬಂಧ ಹೊಂದುತ್ತಾಳೆ. ಈ ತಪ್ಪು ಹೆಜ್ಜೆ ಇಲ್ಲಿಗೆ ನಿಲ್ಲದೆ ಮತ್ತೆ ಮರುಕಳಿಸುತ್ತದೆ. ಚಿಮಣಾಳಿಗೆ ಆದ ಅನ್ಯಾಯದ ವಿರುದ್ಧ ತಿರುಗಿ ಬಿದ್ದ ನಾನಾ ಎಲ್ಲಿ ತಮ್ಮ ನಡುವೆ ಇದ್ದ ಸಂಬಂಧವನ್ನು ಬಯಲು ಮಾಡುತ್ತಾನೋ ಎಂಬ ಭಯದಿಂದ ಆತನನ್ನು ಒಲಿಸಿಕೊಳ್ಳಲು ಹಿಂದೆ ಮಾಡಿದ ತಪ್ಪುದಾರಿಯನ್ನೇ ಆಯ್ಕೆ ಮಾಡಿ ಕೊಳ್ಳುತ್ತಾಳೆ. ಕೊನೆಗೆ ತನ್ನ ಅನೈತಿಕ ಸಂಬಂಧ ಜಗಜ್ಜಾಹಿರಗೊಳ್ಳುತ್ತದೆಂದು ತಿಳಿದ ಪುತಳಾ ಜನನಿಂದೆಗೆ ಹೆದರಿ ನಾನಾನಿಗೆ ವಿಷಹಾಕಿ ಕೊಲ್ಲುತ್ತಾಳೆ. ಆದರೆ ತಾನು ಮಾಡಿದ ಪಾಪಕೃತ್ಯಕ್ಕೆ ಪಶ್ಚಾತ್ತಾಪಪಟ್ಟು ತಾವು ಪಾಪವನ್ನು ಬಿಟ್ಟರು ಪಾಪ ನಮ್ಮನ್ನು ಬಿಡದೆ ಕಾಡುತ್ತದೆ ಎಂದರಿತ ಪುತಳಾ ತಾನೇ ಆತ್ಮಹತ್ಯೆಗೆ ಶರಣಾಗುತ್ತಾಳೆ.

ಪುತಳಾಬಾಯಿಗೆ ಹೋಲಿಸಿದಾಗ ಚಿಮಣಾಳ ವ್ಯಕ್ತಿತ್ವ ಹಿರಿದು ಎನಿಸುತ್ತದೆ. ಆಕೆ ಹರೆಯದಲ್ಲಿನ ಸಹಜ ಮೋಹವೆಂಬಂತೆ ಬಾಪುವನ್ನು ಅಪೇಕ್ಷಿಸುತ್ತಾಳೆ. ಆದರೆ ಪಡದಯ್ಯನಿಂದ ಮೋಸ ಹೋದ ಬಳಿಕ ಆಕೆ ಒಂದು ಬಗೆಯ ವಿರಕ್ತ ಜೀವನವನ್ನು

ನಡೆಸುತ್ತಾಳೆ. ಆಕೆಯ ಕೂಸಿನ ತಂದೆ ಬಾಪುಸಾಹೇಬನೆಂದು ಹೇಳಲು ಅವಕಾಶವಿದ್ದರೂ, ಲಿಂಗಪ್ಪ ತನಗೊಂದು ಬಾಳನ್ನು ಕೊಡುತ್ತೇನೆಂದು ಬಂದರೂ ಯಾವುದಕ್ಕೂ ಒಪ್ಪುವುದಿಲ್ಲ. ಕೊನೆಗೆ ಲಿಂಗಪ್ಪನಿಂದ ಪಾರಾಗಲು ಆತ್ಮಾಹುತಿ ಮಾಡಿಕೊಳ್ಳುತ್ತಾಳೆ. ಪುತಳಾಳ ರೀತಿಯಲ್ಲಿ ಮತ್ತೆ ತಪ್ಪು ಹೆಜ್ಜೆಯನ್ನು ಹಾಕದೆ ಸಾವಿನ ಕಡೆ ಮುಖಮಾಡುತ್ತಾಳೆ. ಈಕೆಯಲ್ಲಿಯೂ ತಾನು ಮಾಡಿದ ತಪ್ಪಿನ ಬಗೆಗೆ ಪಶ್ಚಾತ್ತಾಪಭಾವನೆ ಇದೆ. ಜೊತೆಗೆ ಪ್ರಮಾಣಿಕತೆ ಮತ್ತು ಸತ್ಯನಿಷ್ಠತೆ ಇದೆ.

'ಬಡವರು ಮಾಡಿದ್ದು ವ್ಯಭಿಚಾರ, ಉಳ್ಳವರು ಮಾಡಿದ್ದು ವ್ಯವಹಾರ' ಎಂಬಂತೆ ಉಳ್ಳವರ ಪ್ರತಿನಿಧಿಯಾದ ಪುತಳಾಬಾಯಿಯ ಅನೈತಿಕ ಸಂಬಂಧ ಕಾದಂಬರಿಯ ಕೊನೆಯವರೆಗೂ ಗುಟ್ಟಾಗಿಯೇ ಉಳಿಯುತ್ತದೆ. ಆದರೆ ಚಿಮಣಾಳ ಅನೈತಿಕ ಸಂಬಂಧವನ್ನು ಮಾತ್ರ ಎಲ್ಲರೆದುರು ಬಹಿರಂಗಗೊಳಿಸಲ್ಪಡುತ್ತದೆ. ತುಂಬಿದ ಸಭೆಯಲ್ಲಿ ತನಗಾದ ಅನ್ಯಾಯವನ್ನು, ತನ್ನಳಲನ್ನು ಹೇಳಿ ಕೊಳ್ಳುತ್ತಾಳೆ. ಶೀಲ ಅಶ್ಲೀಲ ವಿಚಾರದಲ್ಲಿ ಪುತಳಾಳಿಗಿಂತ ಚಿಮಣಾಳ ಸ್ಥಾನ ಮೇಲ್ಮಟ್ಟದ್ದು ಎನಿಸುತ್ತದೆ.

## ಲಕ್ಷ್ಮಿಬಾಯಿ ಮತ್ತು ಪಾರ್ವತಪ್ಪ

ಈ ಎರಡೂ ಪಾತ್ರಗಳ ಗುಣ ಸ್ವಭಾವದಲ್ಲಿ ವೈರುಧ್ಯತೆಯನ್ನು ಗುರುತಿಸಬಹುದು. ತಮ್ಮ ಆಸ್ತಿಯನ್ನು ಕಬಳಿಸಲು ಬಂದ ವ್ಯಕ್ತಿಯನ್ನು ಎದುರಿಸಿ ನಿಲ್ಲುವಲ್ಲಿ ಇಬ್ಬರು ಭಿನ್ನರಾಗಿ ನಿಲ್ಲುತ್ತಾರೆ. ತಮ್ಮ ಸ್ಥಾನಮಾನ ಉಳಿಸಿಕೊಳ್ಳುವಲ್ಲಿ ಮನೆತನದ ಮರ್ಯಾದೆ ಕಾಪಾಡುವ ವಿಷಯದಲ್ಲಿ ಪಾರ್ವತಪ್ಪನಲ್ಲಿ ಕಂಡುಬರುವ ದಿಟ್ಟತನ ಮತ್ತು ಅಭಿಮಾನವನ್ನು ಲಕ್ಷ್ಮೀಬಾಯಿಯಲ್ಲಿ ಕಾಣಲು ಸಾಧ್ಯವಿಲ್ಲ.

ರಾಣೋಜಿರಾಯನ ಹಿರಿಯ ಪತ್ನಿಯಾದ ಲಕ್ಷ್ಮೀಬಾಯಿ ತನ್ನ ಪತಿಯ ಮರಣಾನಂತರ ವಾಡೆಯನ್ನು ಬಿಟ್ಟು ಹೋಗಿ ಬಹಳ ದಿನಗಳು ಬಾರದೆ ಹಬ್ಬದ ದಿನಗಳಲ್ಲೂ ವಾಡೆಯನ್ನು ಹಾಳು ಗೆಡಹುವ ಬೇಜವಾಬ್ದಾರಿಯಿಂದ ವರ್ತಿಸುತ್ತಾಳೆ. ಈ ಕಾರಣದಿಂದಾಗಿ ವಾಡೆಯಲ್ಲಿ ತನ್ನ ಸ್ಥಾನವನ್ನು ಕಳೆದು ಕೊಂಡಿದ್ದಲ್ಲದೆ ಜನರ ವಿಶ್ವಾಸವನ್ನು ಕಳೆದುಕೊಳ್ಳುತ್ತಾಳೆ. ವಾಡೆಯಲ್ಲಿ ತನಗೂ ಪಾಲಿದ್ದರೂ ಅದನ್ನು ಕೇಳುವ ಧೈರ್ಯವೂ ಆಕೆಯಲ್ಲಿ ಉಳಿದಿರುವುದಿಲ್ಲ. ಒಂದೇ ಒರೆಯಲ್ಲಿ ಎರಡು ಖಡ್ಗಗಳು ಸ್ವಸ್ಥದಿಂದಿರಲಾರವು ಎಂದರಿತ ಈಕೆ ಸಮಸ್ತ ಆಸ್ತಿಯನ್ನು ಪುತಳಾಬಾಯಿಗೆ ಬಿಟ್ಟು ತನ್ನೆರಡು ಮಕ್ಕಳೊಂದಿಗೆ ಬಡೋದೆಗೆ ಹೊರಟು ಹೋಗುತ್ತಾಳೆ. ಪುತಳಾಬಾಯಿಯ ಮರಣಾನಂತರ ಬಾಳಾಚಾರ್ಯರು ಮತ್ತು ಊರಮುಖಂಡರುಗಳ ಕರೆಯ ಮೇರೆಗೆ ವಾಡಕ್ಕೆ ಬಂದ

ಲಕ್ಷ್ಮೀಬಾಯಿಯನ್ನು ಬಾಪೂಸಾಹೇಬ ವಾಡೆಗೆ ಕಾಲಿಡದಂತೆ ತಲೆಬಾಗಿಲನ್ನು ಮುಚ್ಚುತ್ತಾನೆ. ಆಸ್ತಿಯಲ್ಲಿವು ತನಗೇ ಸೇರಬೇಕಿದ್ದರೂ ಅದನ್ನು ಪಡೆದುಕೊಳ್ಳುವಲ್ಲಿ ವಿಫಲಳಾಗುತ್ತಾಳೆ. ತನಗಾದ ಅನ್ಯಾಯವನ್ನು ಪ್ರತಿಭಟಿಸದೆ ಅಸಹಾಯಕ ಹೆಣ್ಣಾಗಿ ಕಂಡುಬರುತ್ತಾಳೆ.

ಲಕ್ಷ್ಮೀಬಾಯಿಗೆ ಹೋಲಿಸಿದರೆ ಪಾದಕ್ಷಂಯ ಗೌಡತಿ ಪಾರ್ವತೆವ್ವ ಸ್ವಲ್ಪಮಟ್ಟಿಗಾದರೂ ದಿಟ್ಟತನದ ಹೆಣ್ಣಾಗಿ ಕಂಡು ಬರುತ್ತಾಳೆ. ಗೌಡತಿಯಾಗಿರಬೇಕಾದ ದರ್ಪ ಈಕೆಯಲ್ಲೂ ಇದೆ. ಶಂಕರಪ್ಪ ಗೌಡರು ಇದ್ದಾಗಲೇ ಹುಟ್ಟಿಕೊಂಡ ವಾರಸ ಪ್ರಕರಣದ ಸಮಸ್ಯೆ ಅವರು ಸತ್ತ ತರುವಾಯ ಮತ್ತಷ್ಟು ಬಿಗಡಾಯಿಸುತ್ತದೆ. ಪಾದಕ್ಷಂಯ ಜೀವಕೇಂದ್ರವಾಗಿದ್ದ ಗೌಡರ ಮನೆತನಕ್ಕೆ ಒಂದರ ಮೇಲೆ ಒಂದರಂತೆ ಪೆಟ್ಟು ಬೀಳುತ್ತದೆ. ತುಂಬಿದ ಬೆಳೆಯ ಕಳವು. ಹೋಳಿಹುಣ್ಣಿಮೆಯ ದಿನ ಮನೆಯ ಲೂಟಿ. ಕಾರಹುಣ್ಣಿಮೆಯ ದಿನ ಅವರ ಎತ್ತು ಕರಿಹರಿಯದೆ ಆದ ಅಪಮಾನ. ಲಿಂಗಪ್ಪ ಗೌಡರ ವಾರಸುದಾರನೆಂದು ಕೊಟ್ಟ ತೀರ್ಪು. ಆತ ಮನೆಯ ಕಬಜಾ ಕೇಳಲು ದಾವೆಯಿಟ್ಟದ್ದು. ಹೀಗೆ ಹಲವು ಸಮಸ್ಯೆಗಳನ್ನು ಏಕಾಂಗಿಯಾಗಿ ಎದುರಿಸಬೇಕಾದ ಸನ್ನಿವೇಶ ನಿರ್ಮಾಣವಾಗುತ್ತದೆ. ಪಾರ್ವತೆವ್ವನಿಗೆ ಭವಿಷ್ಯವೇ ನಿರಾಶದಾಯಕವೆಂದೆನಿಸಿದರೂ ಹೆದರದೆ ದಿಟ್ಟತನದಿಂದ ನಿಲ್ಲುತ್ತಾಳೆ. ಒಂದರ ಮೇಲೊಂದು ನಡೆದ ಈ ಘಟನೆಗಳು ಅವಳ ಅಭಿಮಾನವನ್ನು ಕೆಣಕಿದ್ದವು. ತನ್ನ ಹೊಲ ಲೂಟಿ ಮಾಡಿಸಿ ಭೂಮಿಯನ್ನು ವಶಪಡಿಸಿಕೊಳ್ಳಲೆಂದು ಬಂದವರ ಮೇಲೆ ಸೇಡು ತೀರಿಸಿಕೊಳ್ಳಲು ನಿರ್ಧರಿಸುತ್ತಾಳೆ. “ನಾನ ಮನೀ ಕಾವಲಿಗೆ ನಿಲ್ಲತೀನಿ. ನನ್ನ ಎಲುಬು ಗ್ವಾಡ್ಯಾಗ ಹುಗದರೂ ಮನೀ ಬಿಟ್ಟು ಹೋಗಾಣೆಲ್ಲ. ಸಿಟ್ಟಿಗೇಳಬಾರದು ಆಚಾರಪ್ಪ. ಮನೆತನದ ಮಾನಕಾಯೂದು ನಂದೂ ಹೊಣೆ. ನಿಮ್ಮದೂ ಹೊಣೆ ಕುಲಕರ್ಣ್ಯಾರ. ಅರ್ಜಿ ಬರೀರಿ. ಲೂಟಿ ಮಾಡಿಸಿದವರ ಕೈಗೆ ಸಾಲಬೇಡಿ ಹಾಕಿದ್ದನ್ನು ಈ ಕಣ್ಣಿ ಕಾಣಬೇಕಾಗೇತಿ. ಗೌಡರ ಮನೀ ಗೂಡವಿಗೆ ಬಂದರ ಏನಾದೀತು. ಒಮ್ಮೆ ಅವರಿಗೆ ತಿಳೀಲಿ” ಎಂದು ಆವೇಶದಿಂದ ನುಡಿದ ಆಕೆಯ ಮಾತಿನಲ್ಲಿ ಶತ್ರುಗಳನ್ನು ಮಟ್ಟಹಾಕುವ, ಆ ಮೂಲಕ ತನ್ನ ಮನೆತನದ ಮಾನರಕ್ಷಣೆಯನ್ನು ಮಾಡುವ ದಿಟ್ಟತನ ಕಂಡುಬರುತ್ತದೆ. ಕೊನೆಗೆ ಪ್ಲೇಗು ಇಡೀ ಊರನ್ನೇ ಆವರಿಸಿಕೊಂಡರೂ, ಸಾವಿರ ಹೆದರಿಕೆ ಹಾಕಿದರೂ ಪಾರ್ವತೆವ್ವ ಗೌಡತಿ ಹೊರಗೆ ಬರದೆ ಮನೆಯೊಳಗೆ ಪ್ರಾಣಬಿಡುತ್ತಾಳೆ. ತನ್ನ ಪತಿಯ ಮರಣದ ನಂತರ ತಾನು ಸಾಯುವ ಕೊನೆಕ್ಷಣದವರೆಗೂ ಮನೆತನದ ಗೌರವ ಕಾಪಾಡುವಲ್ಲಿ ನಿರಂತರ ಪ್ರಯತ್ನಿಸುತ್ತಾಳೆ.

# ಅಧ್ಯಾಯ-೫

# ಸಾಮಾಜಿಕ ಮತ್ತು ಸಾಂಸ್ಕೃತಿಕ ಚಿತ್ರಣ

ಸಮಾಜವನ್ನು ಬಿಟ್ಟು ಜೀವನವಿಲ್ಲ. ಜೀವನದ ಪ್ರತಿರೂಪ ಸಾಹಿತ್ಯವಾಗಿದೆ. ಸಮಾಜವನ್ನು ಬಿಟ್ಟು ಯಾವ ಕೃತಿಯೂ ರೂಪುಗೊಳ್ಳಲು ಸಾಧ್ಯವಿಲ್ಲ. ಸಾಹಿತ್ಯವು ಒಂದು ಕಾಲದ ಸಾಮಾಜಿಕ ಸಂದರ್ಭದಲ್ಲಿ ಸಂಭವಿಸುತ್ತದೆ. ಸಾಹಿತಿಯೂ ಆ ಸಮಾಜದ ಒಂದು ಅನಿವಾರ್ಯವಾದ ಅಂಗವಾಗಿರುವುದರಿಂದ ಮತ್ತು ಸಾಮಾಜಿಕ ಸಂಪರ್ಕ ಮಾಧ್ಯಮವಾದ ಭಾಷೆಯ ಮೂಲಕವೇ ತನ್ನ ಸಮಾಜದೊಂದಿಗೆ ಕ್ರಿಯಾಶೀಲ ವ್ಯವಹರಿಸುವುದರಿಂದ ಸಾಹಿತಿಯಾದವನು ತನ್ನ ಸಮಕಾಲೀನ ಸಮಾಜದ ಬಗ್ಗೆ ಮತ್ತು ಸಾಮಾಜಿಕ ಮಾಧ್ಯಮವಾದ ಭಾಷೆಯ ಬಗ್ಗೆ ವಿಶೇಷ ರೀತಿಯ ಎಚ್ಚರವನ್ನು ತಾಳಿರುತ್ತಾನೆ. ಅದೇ ರೀತಿ 'ಗ್ರಾಮಾಯಣ' ಕಾದಂಬರಿಯು ಅರವತ್ತು ವರ್ಷಗಳ ಹಿಂದಿನ ಒಂದು ಗ್ರಾಮದ ಜೀವನವನ್ನು ಚಿತ್ರಿಸುತ್ತದೆ. "ಆರುನೂರು ಪುಟಗಳಿಗೂ ಮಿಕ್ಕಿರುವ ಈ ಕಾದಂಬರಿಯಲ್ಲಿ ಕೌಟುಂಬಿಕ ಜೀವನದ ಇಣುಕು ನೋಟವೂ ಕಾಣದೊರೆಯದಿರುವುದು ನಿಜಕ್ಕೂ ಆಶ್ಚರ್ಯವನ್ನುಂಟು ಮಾಡುತ್ತದೆ"[1]. ಇಲ್ಲಿನ ಜೀವನದಲ್ಲಿ ಸಾರ್ವಜನಿಕವಾದ ಮೌಲಿಕ ವ್ಯತ್ಯಯಗಳನ್ನು ಮಾತ್ರ ಗುರುತಿಸುವುದು ಕಾದಂಬರಿಯ ಉದ್ದೇಶವಾಗಿದೆ.

'ಗ್ರಾಮಾಯಣವು' ಯಾವ ವಿಚಾರವನ್ನು ಕುರಿತು ಹೇಳುತ್ತಿದೆಯೆಂಬುದನ್ನು ಕೃತಿಯ ಆರಂಭದಲ್ಲಿ ಲೇಖಕರು ಹೇಳುವ ಕೆಲವು ಮಾತುಗಳಿಂದ ಗುರುತಿಸಬಹುದು. "ಹಳೆಯ ಸರಂಜಾಮಿ ಪದ್ಧತಿ ಅಳಿದಿಲ್ಲ; ಹೊಸ ಸಾಮಾಜಿಕ ವ್ಯವಸ್ಥೆ ರೂಪಗೊಂಡಿಲ್ಲ. ಪರಕೀಯರ ಪ್ರಭುತ್ವದಿಂದ ದೇಶವನ್ನು ವ್ಯಾಪಿಸಿದ ಅಜ್ಞಾನ, ಬಡತನಗಳ ಕಾರ್ಗತ್ತಲೆ ಹರಿದಿಲ್ಲ. ದರ್ಪದ ಅಧಿಕಾರಿ ವರ್ಗದ ಸ್ವೇಚ್ಛಾಚಾರ, ಸ್ವಾರ್ಥಕುಟಿಲ ಕಾರಸ್ಥಾನ. ಇದೇ ನ್ಯಾಯವೆಂಬ ಭಾವನೆಯಿಂದ ತಗ್ಗುತ್ತ ನಡೆದಿದ್ದರೂ ಅಜ್ಞರು, ದುರ್ಬಲರು ಇವರ ಜಾಲದ ಭೀತಿಯಿಂದ ಇನ್ನೂ ಮುಕ್ತರಾಗಿಲ್ಲ. ವೇದಕಾಲದಿಂದ ನಡೆದು ಬಂದ ಜಾತಿಯ ಪದ್ಧತಿಗೆ ಸರಂಜಾಮೀ ಪದ್ಧತಿಯ ಅಂಗವಾಗಿ ಹೊಸ ವರ್ಗ ಪದ್ಧತಿಯೊಂದು ಜೊತೆಯಾಗಿತ್ತು. ಅದರ ಫಲವಾದ ಸಾಮಾಜಿಕ ರೀತಿನೀತಿಗಳು ಇನ್ನೂ ಅಳಿದಿರಲಿಲ್ಲ. ಸಮಾಜ ವ್ಯವಸ್ಥೆಯ ತಳಹದಿಗೆ ಗೆದ್ದಲು ಹತ್ತಿದಂತಾಗಿ ಸಾವಿರಾರು ವರ್ಷಗಳಿಂದ ಕಟ್ಟಿದ ಮಂದಿರ ಬೀಳಬಹುದೆಂಬ ಭೀತಿಯಿತ್ತು. ಹೊಸ ಸಮಾಜ ವ್ಯವಸ್ಥೆಯ ರೂಪರೇಷೆಗಳ ಅಸ್ಪಷ್ಟ ಚಿತ್ರವು ಧ್ಯೇಯವಾದಿಗಳ ಕನಸುಗಳಲ್ಲಿ ಮಾತ್ರ ಸುಳಿದಿತ್ತು."[2]

ಕಾದಂಬರಿಯಲ್ಲಿ ಈ ಚಾರಿತ್ರಿಕ ಅನುಭವವನ್ನು ಕಲಾತ್ಮಕವಾಗಿ ನಾಟ್ಯಕರಿಸಿ

ತೋರಿಸುವುದೇ ರಾವಬಹದ್ದೂರರ ಆಶಯವಾಗಿದೆ. ಅಲ್ಲದೆ ಆ ಸಮಾಜದ ಸ್ಥಿತಿಗತಿಗಳನ್ನು ಆದಷ್ಟು ವಸ್ತುವಿಗೆ ನಿಷ್ಠವಾಗಿ ಚಿತ್ರಿಸಬೇಕೆಂಬ ಮೂಲಭೂತ ಆಕಾಂಕ್ಷೆಯೂ ಈ ಲೇಖಕರಿಗುಂಟು. ಸರಂಜಾಮಿ ಪದ್ಧತಿ ಮತ್ತು ಜಾತಿಪದ್ಧತಿ ಬಲವಾಗಿ ಬೇರೂರಿದ್ದುದರ ಸಮಾಜ ಜೊತೆಗೆ ವಿದೇಶಿ ಸಂಸ್ಕೃತಿಯ ಗಾಳಿಯು ಬೀಸತೊಡಗಿತ್ತು. ಪಾಶ್ಚಾತ್ಯದ ಪ್ರಭಾವ ನಿಧಾನವಾಗಿ ನಗರಗಳಿಂದ ಹಳ್ಳಿಗಳಿಗೂ ಹರಿಯಲಾರಂಭಿಸಿ ಅಲ್ಲಿದ್ದ ಮೌಲ್ಯಗಳು ಕುಸಿಯುತೊಡಗಿದ್ದವು. ಇಂಥ ಸಂಕ್ರಮಣಕಾಲದ ಜೀವನದ ನೋವು. ಸಂಕಟವನ್ನು ಕಾದಂಬರಿ ಅಭಿವ್ಯಕ್ತಿಸಿದೆ.

ಕೃಷ್ಣಾನದಿಯ ದಂಡೆಯ ಮೇಲಿರುವ ಪಾದಕ್ಷೇಯಲ್ಲಿ ಮುಖ್ಯವಾಗಿ ನಾಲ್ಕು ಕೇಂದ್ರ ಸ್ಥಾನಗಳನ್ನು ಗುರುತಿಸಬಹುದು. ರಾಣೋಜಿರಾಯ ಘೋರ್ಪಡೆಯವರ ಮನೆತನವಾದ ವಾಡೆ. ಶಂಕರಪ್ಪಗೌಡ ಮನೆತನ. ಪಡದಯ್ಯ ಪ್ರತಿನಿಧಿಸುವ ಮಠ. ಬಾಳಾಚಾರ್ಯರು ಪ್ರತಿನಿಧಿಸುವ ಬ್ರಾಹ್ಮಣರು. ಪಾದಕ್ಷೇಯ ಜೀವನ ಈ ನಾಲ್ಕು ಕೇಂದ್ರಗಳಿಂದ ನಿಯಂತ್ರಿತವಾದರು ಇವರುಗಳಲ್ಲದೆ ಜಾಗೀರುದಾರರನ್ನು ಅವಲಂಬಿಸಿರುವ ರೈತರು. ಹುಲಿಬ್ಯಾಟಿಪಳಬರು. ಕಟುಕರು. ಹೊಲೆಯರು ಹಾಗೂ ಪಾದಕ್ಷೇಗೆ ಆಗಮಿಸಿದ ಮುಸ್ಲಿ ಅಧಿಕಾರಿಗಳು ಹೀಗೆ ಸಮಾಜದ ನಾನಾ ವರ್ಗಕ್ಕೆ ಸೇರಿದ ಜನಸಮೂಹವನ್ನು ಕಾಣಬಹುದು. ಆದರೂ ಈ ಕಾದಂಬರಿಯಲ್ಲಿ ಯಾವೊಂದು ಜಾತಿಯ ಗುಣದೋಷಗಳ ವಿವರಣೆಯೂ ಸಿಗುವುದಿಲ್ಲ. ಬ್ರಾಹ್ಮಣ ವರ್ಗದ ಉತ್ತಮಾಂಶಗಳಿಗೆ ಬಾಳಾ ಚಾರ್ಯರು ಉದಾಹರಣೆಯಾದರೆ, ನಾರಾಯಣಚಾರಿ ದುರಾಸೆಯುಳ್ಳ ಪುರೋಹಿತಶಾಹಿಗಳಿಗೆ ಉದಾಹರಣೆಯಾಗಿದ್ದಾನೆ. ಇನ್ನು ಕೆಳವರ್ಗದವರೆಂದು ಗುರುತಿಸಿಕೊಂಡ ಜನರಲ್ಲಿ ತಮ್ಮ ಬದುಕಿನ ಬಗೆಗೆ ಯಾವ ಮುನ್ನೋಟವೂ ಇಲ್ಲದೆ. ಪೂರ್ವಾಪರ ಯೋಚನೆಯಿಲ್ಲದೆ ಪರಿಸ್ಥಿತಿ, ಸನ್ನಿವೇಶಗಳು ಬಂದ ಹಾಗೆ ನಡೆದುಕೊಂಡು ಹೋಗುವ ಸಾಧಾರಣ ದೃಷ್ಟಿಕೋನ ಕಂಡುಬರುತ್ತದೆ. ಬಡತನ, ಹಸಿವು. ಕಾಯಿಲೆಗಳು ಅವರ ಜೀವನದ ಗತಿಯನ್ನೇ ಬದಲಾಯಿಸುವ ಅಂಶಗಳಾಗಿದ್ದು. ಇವರು ಮೇಲ್ವರ್ಗದವರ ಕೈಗೊಂಬೆಗಳಂತೆ ವರ್ತಿಸಲು ಇವು ಕಾರಣವಾಗಿವೆ.

ಇಲ್ಲಿನ ಸಮಾಜ ಪುರುಷಪ್ರಧಾನವಾಗಿದ್ದು ಸ್ತ್ರೀಯರ ಸ್ಥಾನಮಾನಗಳು ಇತಿಮಿತಿಯಲ್ಲಿದ್ದವು. ಕೌಟುಂಬಿಕ ಪರಿಸರವೇ ಸ್ತ್ರೀಯ ಜಗತ್ತಾಗಿತ್ತು. ಜಾಗೀರುದಾರರ ಮನೆತನದ ಸ್ತ್ರೀಯರಿಗೆ ಘೋಷಾಪದ್ಧತಿ ಜಾರಿಯಲ್ಲಿತ್ತು. ಆಕೆ ಘೋಷವನ್ನು ಧರಿಸದೆ ಹೊರಗೆ ಬರುವಂತೆಯೇ ಇರಲಿಲ್ಲ. ಸಮಾಜದ ಇತರ ವರ್ಗದ ಸ್ತ್ರೀಯರೂ ಕೂಡ ತಮ್ಮ ಮೇಲೆ ಆಗುತ್ತಿದ್ದ ಶೋಷಣೆಯನ್ನು ಪ್ರತಿಭಟಿಸದೆ ಮೂಕವಾಗಿ ಅನುಭವಿಸುತ್ತಿದ್ದರು. ಇದಕ್ಕೆ ಉದಾಹರಣೆಯಾಗಿ ಚಿಮಣಾ, ಮಲ್ಲಿ, ಚಂದ್ರಿ ಮೊದಲಾದವರನ್ನು ಗುರುತಿಸಬಹುದು.

ಪಾದಳ್ಳಿಯ ಜನ ಅಕ್ಷರಗಳ ಮುಖ ಪರಿಚಯವೇ ಇಲ್ಲದವರು. ಇಡೀ ಊರಲ್ಲಿ ಶೇಷಪ್ಪ ಮತ್ತು ಗಾವಠಿಶಾಲೆಯ ಶಿಕ್ಷಕರಾದ ವೆಂಕಣ್ಣ ಮಾಸ್ತರರಿಬ್ಬರೇ ಅಕ್ಷರಬಲ್ಲವರು. ಹಾಗಾಗಿ ಅಧಿಕಾರಿವರ್ಗದವರು ಇವರನ್ನು ಸುಲಭವಾಗಿ ವಂಚಿಸುತ್ತಿದ್ದರು. ಅರ್ಥವಿಲ್ಲದ ಆಚಾರಣೆಗಳು. ಮೂಢನಂಬಿಕೆಗಳು ಇವರನ್ನು ಆವರಿಸಿಕೊಂಡಿದ್ದವು. ಇದರಿಂದ ಊರಿಗೆ ತಗುಲಿದ್ದ ಕಾಲರಾ. ಪ್ಲೇಗುಗಳೆಂಬ ಮಹಾಮಾರಿ ತನ್ನ ರುದ್ರನರ್ತನವನ್ನೇ ಮಾಡಲು ಕಾರಣವಾಯಿತು.

ಉತ್ತರ ಕರ್ನಾಟಕದ ಜನಜೀವನವನ್ನು ತನ್ನ ವಸ್ತುವನ್ನಾಗಿ ಮಾಡಿಕೊಂಡಿರುವ ಗ್ರಾಮಾಯಣವು ಮುಖ್ಯವಾಗಿ ಪಾದಳ್ಳಿಗೇ ಸೀಮಿತವಾಗಿರುವುದರಿಂದ ಇದೊಂದು ಪ್ರಾದೇಶಿಕ ಮಹತ್ವವುಳ್ಳ ಕಾದಂಬರಿಯೆಂಬುದೇನೋ ನಿಸ್ಸಂಶಯ. ಇಲ್ಲಿ ಬರುವ ಸಂಭಾಷಣೆಯ ಮೂಲಕ ಈ ಅನುಭವವನ್ನು ಓದುಗ ದಟ್ಟವಾಗಿಯೇ ಅನುಭವಿಸುತ್ತಾರೆ. ಆದರೆ ಈ ಕಾದಂಬರಿಯಲ್ಲಿ ಪ್ರಾದೇಶಿಕ ಹಿನ್ನೆಲೆ ಅಷ್ಟು ಸ್ಫುಟವಾಗಿ ಕಲ್ಪಿತವಾಗುವುದಿಲ್ಲ. ಕೃಷ್ಣಾನದಿಯ ದಡದ ಮೇಲಿರುವ ಪಾದಳ್ಳಿಯ ವಿವರ. ಮಠದ ವಿವರ. ಪಾದಳ್ಳಿಯ ಮೇಲ್ಬ್ರ ಲಕ್ಷಣದ ಕಲ್ಪನೆ, ಶೇಷಪ್ಪನ ಮನೆ. ಬಾಳಾಚಾರ್ಯರ ಮನೆ ಈ ಯಾವ ವಿವರಗಳೂ ಕೂಡ ಪ್ರಾದೇಶಿಕ ಹಿನ್ನೆಲೆಯನ್ನು ಓದುಗರಿಗೆ ಪರಿಣಾಮಕಾರಿಯಾಗಿ ಕಟ್ಟಿಕೊಡುವಲ್ಲಿ ವಿಫಲವಾಗಿದೆ. "ಪ್ರಮುಖವಾದ ಸಾರ್ವಜನಿಕ ಕೇಂದ್ರಗಳನ್ನು ಓದುಗ ಪ್ರಾದೇಶಿಕವಾಗಿ ಗುರುತಿಸಬೇಕಾದರೆ ಜತೆಯಲ್ಲಿ ಯಾರನ್ನಾದರೂ ಕರೆದುಕೊಂಡು ಹೋಗಬೇಕಾಗುತ್ತದೆ. ಇಲ್ಲವೆ ಅವುಗಳ ಮುಂದಿನ ಬೀದಿಯಲ್ಲಿಯೇ ನಿಂತಿದ್ದರೂ ಯಾರನ್ನಾದರೂ ಕೇಳಬೇಕಾಗುತ್ತದೆ. ಕಾದಂಬರಿಯನ್ನು ಓದಿ ಅವುಗಳ ಭೌತಿಕ ಹಿನ್ನೆಲೆಯನ್ನು ಕಲ್ಪಿಸಿಕೊಳ್ಳುವುದಕ್ಕೆಬೇಕಾದ ಯಾವ ಪ್ರಬಲ ಸಾಧನಗಳೂ ಇಲ್ಲಿ ದೊರೆಯುವುದಿಲ್ಲ"[5]. ಆದ್ದರಿಂದ ಪ್ರಾದೇಶಿಕತೆಯ ಅಂಶ ಇಲ್ಲಿ ಸೋಲುತ್ತದೆ.

ಕಾದಂಬರಿಯುದ್ದಕ್ಕೂ ಹತ್ತುಹಲವು ಸಂಪ್ರದಾಯ ಬದ್ಧ ಆಚರಣೆಗಳು. ಹಬ್ಬಗಳು. ಉತ್ಸವಗಳ ಚಿತ್ರಣವನ್ನು ಕಟ್ಟಿಕೊಡುತ್ತಾರೆ. ನವರಾತ್ರಿಯ ಉತ್ಸವ. ಕಾರ ಹುಣ್ಣಿಮೆಯ ಮುನ್ನಾದಿನ ನಡೆಯುವ ಎತ್ತುಗಳ ಎಣ್ಣೆಯ ಸ್ನಾನ, ಗ್ರಾಮದೇವತೆಗಳಿಗೆ ಕುರಿಬಲಿಕೊಡುವುದು. ದೆವ್ವಭೂತಗಳ ನಂಬಿಕೆ, ಹೋಳುಹುಣ್ಣಿಮೆ. ಕಾಮದಹನ. ಓಕಳಿ. ಕುಸ್ತಿಕಾಳಗ, ಕತ್ತೆಯ ಮೇಲೆ ಮೆರವಣಿಗೆ, ಮಾರುತಿದೇವರ ನೀರೋಕುಳಿ ಹಾಲೋಕುಳಿ. ಕುಸ್ತಿಕಾಳಗ, ಬೇಟೆ, ಕರಿಹಾಯುವುದು ಮುಂತಾದ ಉತ್ಸವಗಳು ಈ ಪರಿಸರದ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನವನ್ನು ಕಟ್ಟಿಕೊಡುವ ಅಂಶಗಳಾಗಿವೆ. ಎಷ್ಟೋ ಕ್ಷುದ್ರವಾದ ವಿಷಯವಾದರೂ ಅದು ತನ್ನ ಸಂಪೂರ್ಣ ವಿವರಗಳೊಡನೆಯ ಕಾದಂಬರಿಯಲ್ಲಿ ಬಿಚ್ಚಿಕೊಳ್ಳುತ್ತದೆ. ಇಲ್ಲಿ ಕೆಲವು ಸಂಪ್ರದಾಯಬದ್ಧ ಆಚರಣೆಗಳನ್ನು ಮಾತ್ರ ವಿವರಿಸಲಾಗಿದೆ.

ಗ್ರಾಮದೇವತೆಗಳ ಮುನಿದ ಕಾರಣದಿಂದ ಊರಿಗೆ ಕಾಲರಾ ಬೇನೆ ತಗುಲಿದೆ ಎಂದು ನಂಬಿದ ಜನ ದೇವಿಯ ಕ್ರೋಧವನ್ನು ಶಾಂತಗೊಳಿಸಲು ಕುರಿಬಲಿ, ಅಂಬಲಿದಾನದ ಎಡೆ ಮೊದಲಾದ ಕಾರ್ಯದಲ್ಲಿ ಮಗ್ನರಾಗುತ್ತಾರೆ. ಅಲ್ಲದೆ ಗೌಡರ ಬೆಳೆಯನ್ನು ಮತ್ತು ಮನೆಯನ್ನು ಲೂಟಿ ಮಾಡುವಾಗ ಹುಟ್ಟಿದ ಶಂಕರಗೌಡರ ದೆವ್ವದ ಕತೆ ಸುಪ್ತಭೀತಿಯ ಕಲ್ಪನೆಯನ್ನು ಜೊತೆಗೆ ಜನರಲ್ಲಿನ ಮೂಢ ನಂಬಿಕೆಯನ್ನು ಎತ್ತಿತೋರಿಸುತ್ತದೆ.

ಹೋಳಿ ಹುಣ್ಣಿಮೆ ದಿನ ಕಾಮಣ್ಣನಿಗೆ ಬೆಂಕಿ ಹಚ್ಚುವುದು ಸಾಮಾನ್ಯ ಸಂಗತಿ. ಆದರೆ ಇಲ್ಲಿ ಮೊದಲು ಹೊಲಗೇರಿಯಲ್ಲಿನ ಕಾಮನಿಗೆ ಬೆಂಕಿ ಹಚ್ಚಿ ಆ ಬೆಂಕಿಯನ್ನು ತಂದಮೇಲೆ ಅಗಸೆಯ ಮುಂದಿನ ಕಾಮದಹನ ನಡೆಯುತ್ತಿತ್ತು. ಊರ ಮುಖಂಡರುಗಳು ಒಂದೆಡೆ ಸೇರಿದ ಮೇಲೆ ಹುಲಿಯಾಟದ ಹಳಬರು ಬೆಂಕಿಯನ್ನು ತರಲು ಹೊಲಗೇರಿಗೆ ದಿಗ್ವಿಜಯ ಮಾಡುತ್ತಿದ್ದರು. ಹಳಬರು ಬೆಂಕಿಗೆ ಕೈ ಹಾಕಿದಾಗ ಹೊಲೆಯರು ಅದನ್ನು ಒಯ್ಯಗೊಡದೆ ಅವರ ಕೈಗಳ ಮೇಲೆ ಸತ್ತದನಗಳ ಎಲುಬುಗಳನ್ನು ತೂರುತ್ತಿದ್ದರು. ಅದನ್ನೆಲ್ಲ ಸಹಿಸಿಕೊಂಡು ಬೆಂಕಿಯನ್ನು ತರಲಾಗುತ್ತಿತ್ತು. ಸಮಾಜದ ಕೆಳಸ್ತರವೆಂದು ಗುರುತಿಸಿಕೊಂಡ ಕೇರಿಯಿಂದ ಬೆಂಕಿಯನ್ನು ತರುವುದು ಒಂದು ವಿಶೇಷವಾದ ಆಚರಣೆಯೆನಿಸುತ್ತದೆ.

ಕಾಮ ದಹನದ ಮಾರನೆ ದಿನವೇ ಓಕಳಿ. ಈ ದಿನದ ವಿಶೇಷವೆಂದರೆ, ಪಾದಕ್ಕಿಯಲ್ಲಿ ಸಣ್ಣವರು ದೊಡ್ಡವರೆನ್ನುವ ತಾರತಮ್ಯ ತೋರದೆ ಗೌರವ-ಮರ್ಯಾದೆಗಳು ಬಗಣಿರಾಡಿಯಲ್ಲಿ ಮುಳುಗಿರುತ್ತವೆ. ದೊಡ್ಡವರನ್ನೇ ಹಿಡಿದು ಕತ್ತೆಯ ಮೇಲೆ ಕೂಡಿಸಿ, ಹರಕು ಮೆಟ್ಟಿಗಳ ಮಾಲೆಯನ್ನು ಹಾಕಿ, ತಿಪ್ಪೆಯಲ್ಲಿ ಬಿದ್ದ ಹರಕು ಮೊರ-ಬುಟ್ಟಿಗಳ ಛತ್ರಚಾಮರಗಳ ಅಪೂರ್ವ ವೈಭವದೊಂದಿಗೆ ಮೆರವಣಿಗೆ ಮಾಡಲಾಗುತ್ತಿತ್ತು. ಊರ ಪ್ರಮುಖ ಚತುಷ್ಟಯರಾದ ಶೇಷಪ್ಪ, ಪಡದಪ್ಪ, ಬಾಪುಸಾಹೇಬ, ಲಿಂಗಪ್ಪಗೌಡರನ್ನು ಕತ್ತೆಯ ಮೇಲೆ ಕೂರಿಸಿಕೊಂಡು ಮೆರವಣಿಗೆ ಸಾಗುತ್ತಿತ್ತು. ಈ ಆಚರಣೆ ಹಾಸ್ಯಮಯದಿಂದ ಕೂಡಿರುವುದಲ್ಲದೆ ಪಾದಕ್ಕಿಯ ಅವಸಾನಕ್ಕೆ ಕಾರಣಕರ್ತರಾದ ಅನಿಷ್ಟಚತುಷ್ಟರಿಗೆ ಶಿಕ್ಷೆ ವಿಧಿಸಿದಂತಿದೆ.

ಮಾರುತಿದೇವರ ಹೆಸರಿನಲ್ಲಿ ಮಾಡುವ ಓಕಳಿ, ಉತ್ತರ ಕರ್ನಾಟಕದ ಭಾಗದಲ್ಲಿ ರೂಢಿಯಲ್ಲಿದ್ದ ಸ್ತ್ರೀ ಶೋಷಣೆಗೆ ಹಿಡಿದ ಕನ್ನಡಿಯಾಗಿದೆ. ಮಾರುತಿ ಗುಡಿಯ ಮುಂದಿರುವ ಎರಡಾಳುದ್ದ ಹೊಂಡದಲ್ಲಿ ನೀರನ್ನು ತುಂಬಿಸಿ ಅಲ್ಲಿಗೆ ಕೆಳಜಾತಿಯ ಸೂಳೆಯರೆಂದು ಗುರುತಿಸಿಕೊಂಡ ಸ್ತ್ರೀಯರನ್ನು ಕರೆತಂದು ಕುಸ್ತಿಗಡಿಗಳು ಅವರ ಮೇಲೆ ಓಕಳಿ ನೀರನ್ನು

ಮೊಗೆದು ಎರಚುತ್ತಿದ್ದರು. ಆ ನೀರಿನ ಹೊಡೆತದಿಂದ ತಪ್ಪಿಸಿಕೊಳ್ಳಲು ಅವರು ಮುಳ್ಳಿನ ಕಂಟಿಗಳನ್ನು ಅವರ ಮೇಲೆ ಬೀಸಿ ಹೊಡೆಯುತ್ತಿದ್ದರು. ಕುಸ್ತ್ರಿಗಡಿಗಳ ಮೈಯಿಗೆ ತಾಕಿದ ಮುಳ್ಳಿನಿಂದ ರಕ್ತಚಿಮ್ಮಿ ಇಡೀ ನೀರೆಲ್ಲ ರಕ್ತಮಯವಾಗುತ್ತಿತ್ತು. ಇದಾವುದರ ಪರಿವೇ ಇಲ್ಲದೆ ಕೇಕೆ ಹಾಕುತ್ತ ಗದ್ದಲಗಳಿಂದ ಹೊಂಡದಲ್ಲಿ ಘುಮುಘುಮಿಸುತ್ತ ಕುಣಿಯುತ್ತಿದ್ದರು. ನೀರಲ್ಲಿ ನೆನೆದು ಸೀರೆಯಲ್ಲ ಎಷ್ಟೆ ತಪ್ಪಡಿಯಾಗಿದ್ದರೂ ಅವರು ಮುಖ ತಿರುಗಿಸುವಂತಿರಲಿಲ್ಲ. ಈ ಆಚರಣೆ ಅತ್ಯಂತ ಅಮಾನವೀಯ ಹಾಗೂ ಘೀಭತ್ಸವಾದುದೆನಿಸುತ್ತದೆ. ಮೇಲ್ವರ್ಗದವರಿಗೆ ಮೋಜು ಎನಿಸುವ ಈ ಆಚರಣೆ ಅಂದಿನ ಸಮಾಜದಲ್ಲಿ ಬೇರು ಬಿಟ್ಟಿದ್ದ ದೇವದಾಸಿ ಎಂಬ ಅನಿಷ್ಟ ಪದ್ಧತಿಯನ್ನು ಚಿತ್ರಿಸುವುದರ ಜೊತೆಗೆ. ಸ್ತ್ರೀಯರ ಅಸಹಾಯಕತೆಯನ್ನು. ಪುರುಷಸಮಾಜದ ದಬ್ಬಾಳಿಕೆಯನ್ನು ಚಿತ್ರಿಸುತ್ತದೆ. ನಮ್ಮ ಸಂಸ್ಕೃತಿಯಲ್ಲಿ ಸ್ತ್ರೀಯರಿಗೆ ಪೂಜ್ಯನೀಯವಾದ. ಗೌರವಯುತವಾದ ಸ್ಥಾನವಿದೆ. ಆದರೆ ಇಲ್ಲಿ ಚಿತ್ರಿತವಾಗಿರುವ ಬಹುಪಾಲು ಸ್ತ್ರೀಯರೆಲ್ಲರೂ ಒಂದಲ್ಲ ಒಂದು ಕಾರಣಕ್ಕೆ ಶೋಷಿತರೇ ಆಗಿದ್ದಾರೆ.

ನಮ್ಮ ಸಮಾಜದಲ್ಲಿ ಮಠ ಮಾನ್ಯಗಳಿಗೆ ವಿಶೇಷವಾದ ಗೌರವ ಮಾನ್ಯತೆಗಳ ಜೊತೆಗೆ ಪೂಜ್ಯನೀಯ ಸ್ಥಾನವಿದೆ. ಆದರೆ ಆಚಾರ. ವಿಚಾರ. ಸಮ್ಯಕಜ್ಞಾನಗಳ ಅರಿವಿಲ್ಲದ ವ್ಯಕ್ತಿಯಿಂದ ಪರಂಪರಾಗತ ಮೌಲ್ಯವುಳ್ಳ ಮಠವು ತನ್ನ ಸ್ಥಾನ ಮಾನವನ್ನು ಕಳೆದುಕೊಳ್ಳುತ್ತದೆ. ಅಲ್ಲದೆ ಜನರಲ್ಲಿದ್ದ ಶ್ರದ್ಧೆ. ನಂಬಿಕೆಗಳನ್ನು ಹುಸಿಗೊಳಿಸುವ ಬಗೆಯನ್ನು ಪಾದಕ್ಕಯ್ಯ ಹಿರೇಮಠದ ಸ್ಥಿತಿಯ ಮೂಲಕ ಚಿತ್ರಿಸಿದ್ದಾರೆ.

ಕಾದಂಬರಿಯಲ್ಲಿ ಶೋಷಣೆಗೆ ಒಳಗಾಗುವ ಸ್ತ್ರೀಯರದು ಒಂದು ಮುಖವಾದರೆ ತನ್ನ ಪತಿ ತಪ್ಪಿತಸ್ಥನಾಗಿದ್ದರೂ ಕೂಡ ತನ್ನ ಮಾಂಗಲ್ಯವನ್ನು ಉಳಿಸಿಕೊಳ್ಳಲು ಮುಂದಾಗುವ ರತ್ನ. ತನ್ನ ಪತಿಸೇವೆಯೇ ಮುಖ್ಯವೆಂದು ತಾನು ಬದುಕಿರುವವರೆಗೂ ಆ ಕಾಯಕದಲ್ಲಿಯೇ ನಿರತಳಾದ ಬಾಳಾಚಾರ್ಯರ ಪತ್ನಿ. ತನ್ನ ಮನೆತನದ ಮಾನರಕ್ಷಣೆಯೇ ತನ್ನ ಗುರಿ ಎಂದು ಕೊನೆವರೆಗೂ ಹೋರಾಡಿದ ಪಾರ್ವತಪ್ಪ ಇವರಲ್ಲಿ. ಆದರ್ಶ ಸತಿಯ ಗುಣವನ್ನು ಗುರುತಿಸಬಹುದು.

ಒಟ್ಟಾರೆ ಗ್ರಾಮಾಯಣ ಕಾದಂಬರಿಯು ಸಮಕಾಲೀನ ಜನ ಜೀವನದ ಮೇಲೆ ಬೆಳಕು ಚೆಲ್ಲುವ ಮೂಲಕ ಉತ್ತರ ಕರ್ನಾಟಕದ ಭಾಗದಲ್ಲಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನದ ಮುಖವನ್ನು ಅನಾವರಣ ಮಾಡುತ್ತದೆ.

---

ಅಡಿಟಿಪ್ಪಣಿ

೧. ಕೆ.ಬಿ. ಕುರ್ತಕೋಟಿ. ಗ್ರಾಮಾಯಣ ಸಮೀಕ್ಷೆ- ಪು. [illegible]

೨. ರಾವಬಹದ್ದೂರ. ಗ್ರಾಮಾಯಣ. ಪು. ೧

೩. ಎಸ್.ಜೋರಲಿಂಗಯ್ಯ-ಕಾನೂರು ಹೆಗ್ಗಡಿತಿ: ವಿವೇಚನೆ. ಪು. ೧೨೬

# ಅಧ್ಯಾಯ-೬
# ಗ್ರಾಮಾಯಣ ಕಾದಂಬರಿಯ ತಂತ್ರವಿನ್ಯಾಸ

ಕಾದಂಬರಿಕಾರನ ಪ್ರಜ್ಞಾಪೂರ್ವಕ ಪ್ರಯತ್ನದಿಂದ ರಚಿತವಾಗುವ ತಂತ್ರ ವಿನ್ಯಾಸದ ಹಿಂದಿನ ದೃಷ್ಟಿ. ಅನುಭವ ಎಂಥದ್ದು. ಎಂಬುದನ್ನು ನೋಡುವುದು ಮುಖ್ಯ. ಉತ್ತರ ಕರ್ನಾಟಕದ ಗ್ರಾಮೀಣ ಜನರ ಜೀವನವನ್ನು ಚಿತ್ರಿಸುವ ಈ ಕಾದಂಬರಿ ಅಲ್ಲಿನ ವ್ಯಕ್ತಿಗಳ ಆಸೆ-ಆಕಾಂಕ್ಷೆಗಳನ್ನು, ಅವರ ಅಂತಃಕಲಹ. ಅಹಂಕಾರ. ಪ್ರತಿಷ್ಠೆ. ದರ್ಪ. ಸ್ವಾರ್ಥ. ಅಭಿಮಾನ. ಹಠ. ಸಾಂಸ್ಕೃತಿಕ ಮೌಲ್ಯಗಳ ಸಂಘರ್ಷಗಳನ್ನು ಚಿತ್ರವತ್ತಾಗಿಸುವ ಈ ಕಾದಂಬರಿಯಲ್ಲಿ ಲೇಖಕರ ಅನುಭವ ಶ್ರೀಮಂತಿಕೆ ಇದೆ.

ಕಾದಂಬರಿಯಲ್ಲಿ ಪಾತ್ರಗಳ ಬಾಹುಳ್ಯತೆ ಇರುವುದರಿಂದ ಅವುಗಳ ರಚನೆಯಲ್ಲಿ ವೈವಿಧ್ಯವಾಗಲಿ. ಬೆಳವಣಿಗೆಯಾಗಲೀ ಕಂಡುಬರಲು ಸಾಧ್ಯವಿಲ್ಲ. ಆದರೂ ಪಾತ್ರಗಳು ಮತ್ತು ಅವುಗಳ ಅಂತರ್ಮಥನಗಳು. ಘಟನೆಗಳು. ವಿವರಣೆಗಳು ಸ್ವಲ್ಪವೂ ಆಚೆ ಈಚೆ ಹೋಗದೆ ವಸ್ತುವಿನ ವಿನ್ಯಾಸದಲ್ಲಿ ಸಮುಚಿತವಾಗಿ ಸೇರಿಕೊಂಡಿವೆ. ಕಾದಂಬರಿಯಲ್ಲಿ ಅನೇಕ ಘಟನೆಗಳು ಏಕಕಾಲದಲ್ಲೇ ಜರುಗಿದರೂ ಕತೆಯ ಓಟಕ್ಕೆ ಅಡ್ಡಿಯನ್ನುಂಟು ಮಾಡುವುದಿಲ್ಲ. ಕೃಷ್ಣಾನದಿಯ ಪ್ರವಾಹದಂತೆ ಕಥೆ ನೇರವಾಗಿ ಒಂದೇ ದಿಕ್ಕಿನಲ್ಲಿ ಹರಿಯುತ್ತದೆ. ಲೇಖಕರು ಕೃತಿಯನ್ನು ಮೂರು ಭಾಗಗಳಾಗಿ ವಿಂಗಡಿಸಿರುವುದು ಅರ್ಥಪೂರ್ಣವಾಗಿದೆ. ಮೊದಲನೆಯ ಭಾಗದಲ್ಲಿ ಶಂಕರಪ್ಪಗೌಡರು ಊರಿನ ಪ್ರಮುಖ ವ್ಯಕ್ತಿಯಾಗಿದ್ದಾರೆ. ನಾನಾನ ನಿಗೂಢ ಸಾವಿನ ನಂತರದ ಘಟನೆಗಳನ್ನು ಈ ದೃಷ್ಟಿಯಿಂದ ನೋಡಬಹುದು: ವಾಡೆಯ ಒಳಜಗಳ – ಅದರಿಂದಾಗಿ ಪುತಳಾ ಪಾದಕ್ಕಿಯನ್ನು ಸೇರುವುದು: ಬಾಪೂ ವಾಡೆಯಲ್ಲಿ ಮುಖ್ಯವಾಗುವುದು: ಚಿಮಣಾಳ ಮೇಲೆ ಅವನ ಕಣ್ಣು ಬೀಳುವುದು: ಪಡದಯ್ಯ ಅದನ್ನು ದುರುಪಯೋಗ ಪಡಿಸಿಕೊಳ್ಳುವುದು: ನಾನಾನ ಸಾವು; ಅಲ್ಲಿಂದ ಮುಂದೆ ಊರಲ್ಲಿ ಎರಡು ಬಣಗಳಾಗುವುದು: ಪುತಳಾಳ ಆತ್ಮಹತ್ಯೆ ಹೀಗೆ ಘಟನೆಗಳು ಒಂದಕ್ಕೊಂದು ತಳಕುಹಾಕಿಕೊಂಡಿವೆ. ಮೊದಲ ಭಾಗ ಗೌಡರ ಸಾವಿನಿಂದ ಮುಗಿಯುವುದೂ ಅರ್ಥಪೂರ್ಣವಾಗಿದೆ. ಹಲವು ಘಟನೆಗಳಿಂದ ತಳಮಳಿಸಿದ ಪಾದಕ್ಕಿ ಶಂಕರಪ್ಪಗೌಡರನ ಮರಣದ ನಂತರ ದುಷ್ಟಶಕ್ತಿಗಳ ಆಘಾತ ತಡೆದುಕೊಳ್ಳುವ ಶಕ್ತಿಯಿಲ್ಲದೆ ತತ್ತರಿಸುತ್ತದೆ.

ಎರಡನೆ ಮತ್ತು ಮೂರನೇ ಭಾಗದಲ್ಲಿ ಗೌಡರ ಮನೆತನ ನಿಧಾನವಾಗಿ ಕುಸಿಯುವುದನ್ನು ಚಿತ್ರಿಸಿದ್ದಾರೆ. ಎರಡನೇ ಭಾಗದಲ್ಲಿ ದಾದಾ. ಬಾಳಾಚಾರ್ಯರು ಮುಖ್ಯವಾಗಿ ಬೆಳೆಯುತ್ತಾರೆ. ಗೌಡರ ಮನೆಯ ಮತ್ತು ಪಾದಕ್ಕಿಯ ಗೌರವ-ಮಾನವನ್ನು

ಉಳಿಸಲು ಇವರಿಬ್ಬರೂ ತೀವ್ರ ಕಳಕಳಿಯಿಂದ ಹೋರಾಡುತ್ತಾರೆ. ಅಧಿಕಾರದ ಹೋರಾಟದಲ್ಲಿ ಸಂದಿಗ್ಧ ಪರಿಸ್ಥಿತಿ ಹುಟ್ಟಿಕೊಂಡರೂ ಗಿಬ್ಸನ್ ಸಾಹೇಬನ ವಿಚಿತ್ರ ನಿರ್ಣಯದಿಂದ ಪಾದಳ್ಳಿಯ ಅವನತಿ ನಿಶ್ಚಿತವಾಗುತ್ತದೆ. ಕಾದಂಬರಿಯ ಮೂರನೆಯ ಭಾಗ ಪಿಶಾಚಿಗಳ ನೃತ್ಯವನ್ನೇ ಹೋಲುತ್ತದೆ. ಲೂಟಿ, ಹಗಲು ದರೋಡೆ, ಅತ್ಯಾಚಾರಗಳ ಸರಪಳಿಯಲ್ಲಿ ಸಿಕ್ಕ ಪಾದಳ್ಳಿಗೆ ಮುಕ್ತಿ ದೊರೆಯುವುದು ಪ್ಲೇಗಿನ ಅನಾಹುತದಲ್ಲಿ. ಮುಖ್ಯ ಘಟನೆಗಳ ಆಯ್ಕೆ, ಜೋಡಣೆಯಲ್ಲಿ ಅದ್ಭುತ ಕೌಶಲವನ್ನು ತೋರಿದ್ದಾರೆ. ಆದರೂ ದಾದಾನ ಸಾಹಸಗಳನ್ನು ಪ್ರದರ್ಶಿಸಲೆಂದೇ ಹಲವಾರು ಸನ್ನಿವೇಶಗಳನ್ನು ಸೃಷ್ಟಿಸಿ ಕಾದಂಬರಿಯ ವಾಸ್ತವತೆಯಲ್ಲಿ ಅದ್ಭುತರಮ್ಯ ಅಂಶಗಳು ಸೇರಿಕೊಂಡು ಅಭಾಸವನ್ನುಂಟು ಮಾಡುತ್ತವೆ.

ಕಾದಂಬರಿ ತನ್ನ ವಸ್ತುವನ್ನು ಪ್ರದರ್ಶಿಸಲು ಹಾಗೂ ತಾನು ಹೇಳಬೇಕೆಂದಿರುವ ಸಂದೇಶವನ್ನು ಸಾರಲು ಆರಿಸಿಕೊಳ್ಳುವ ಪಾತ್ರಸೃಷ್ಟಿ ವಿಧಾನ ಅದರ ಉತ್ತಮಿಕೆಗೆ ಕನ್ನಡಿಯಾಗಿದೆ. ಗ್ರಾಮಾಯಣದಲ್ಲಿನ ಪಾತ್ರಗಳನ್ನು ಗಮನಿಸಿದಾಗ ಒಂದು ವಿಶೇಷ ಕಾಣುತ್ತದೆ. ಈ ಕಾದಂಬರಿಯ ಪಾತ್ರ ನಿರ್ಮಾಣದಲ್ಲಿ ಒಂದು ಅಪರೂಪ ಸಂಯೋಜನೆ ಇದೆ. ಸಾದೃಶ್ಯಾತ್ಮಕ, ವೈದೃಶ್ಯಾತ್ಮಕ ಗುಣಗಳುಳ್ಳ ಬಹುತೇಕ ಜೋಡಿಗಳು ಕಾದಂಬರಿಯ ಬಂಧದ ತುಂಬ ಚೆಲ್ಲಿಕೊಂಡಿವೆ. ಪಡದಯ್ಯ ಕೆಡುಕಿನ ಸಂಕೇತವಾದರೆ, ಶಿವಯೋಗಿ ಸ್ವಾಮಿಗಳು ಪಾವಿತ್ರ್ಯತೆಯ ಸಂಕೇತವಾಗಿದ್ದಾರೆ. ಇದೇ ಬಗೆಯ ವಿಮುಖ ಪರಿವರ್ತನೆಯ ವಿಕಾಸವನ್ನು ವೈದೃಶ್ಯ ಪಾತ್ರಗಳಾದ ಬಾಪುಸಾಹೇಬ ಮತ್ತು ಲಿಂಗಪ್ಪ ಇವರಲ್ಲಿಯೂ ಕಾಣಬಹುದು. ಲಿಂಗಪ್ಪ ತನ್ನ ಕಾಮಲಾಲಸೆಯಿಂದ ಹುಚ್ಚಿಡಿದು ಬೆಂಕಿಗೆ ಆಹುತಿಯಾದರೆ ಬಾಪುಸಾಹೇಬ ತನ್ನ ತಪ್ಪಿನ ಅರಿವಾಗಿ ಲಕ್ಷ್ಮಿಬಾಯಿಯಲ್ಲಿ ಕ್ಷಮಾಪಣೆ ಯಾಚಿಸುತ್ತಾನೆ.

ಇದೇ ರೀತಿಯಲ್ಲಿ ಶೇಷಪ್ಪ–ಪಡದಯ್ಯ, ಚಿಮಣಾ–ಪುತಳಾ, ಪಾರ್ವತವ್ವ–ಲಕ್ಷ್ಮಿಬಾಯಿ, ಬಾಳಾಚಾರಿ–ನಾರಾಯಣಚಾರಿ ಮೊದಲಾಗಿ ಗುರ್ತಿಸಬಹುದು. ಬದಲಾಗುವುದು–ಬದಲಾಗದಿರುವುದು, ಸ್ಥಿರತೆ–ಅಸ್ಥಿರತೆ, ಪ್ರಬಲತೆ–ದುರ್ಬಲತೆ, ನಿರ್ಲಿಪ್ತತೆ–ಲೋಭತನ ಮೊದಲಾದ ವೈದೃಶ್ಯ ಪ್ರವೃತ್ತಿಯುಳ್ಳ ಪಾತ್ರಗಳನ್ನು ಎದುರುಬದುರಾಗಿ ನಿಲ್ಲಿಸುವುದರಿಂದ ಎರಡು ಪಾತ್ರಗಳು ಪರಸ್ಪರ ಸ್ಫೋಟಗೊಳ್ಳುತ್ತ ಹೋಗುವುದನ್ನು ಕಾಣಬಹುದು.

ತಂತ್ರ ವಿನ್ಯಾಸದಲ್ಲಿ ಅಲ್ಲಲ್ಲಿ ಬಳಕೆಯಾಗಿರುವ ಇತರ ವಿಧಾನಗಳನ್ನು ಸ್ಥೂಲವಾಗಿ ಸಂಗ್ರಹಿಸಬಹುದು. ಕನಸುಗಳು; ಇವು ಕಥಾ ಓಟದ ಮುನ್ಸೂಚನೆಗೆ ಓದುಗರನ್ನು ಪೂರ್ವಸಿದ್ದಗೊಳಿಸುತ್ತವೆ; ಫ್ಲಾಷ್‌ಬ್ಯಾಕ್ ವಿಧಾನ: ಪ್ರಸ್ತುತ ಘಟನೆಗಳಿಗೆ ಒಂದು ಅರ್ಥಮೌಲ್ಯ ಒದಗಿಸುವ ರೀತಿ; ಇವುಗಳ ಜೊತೆಗೆ ಆಕಸ್ಮಿಕಗಳೂ ಕಥಾ ಪೋಷಣೆಗೆ ನೆರವಾಗುತ್ತವೆ. ಯಶವಂತರಾಯರ ಮನೆಯಲ್ಲಿ ದಾದಾ ಕಾಣುವ ಕನಸು, ಪಾದಳ್ಳಿಯಿಂದ ನಿರ್ಗಮಿಸುವ

ಮುನ್ನಾದಿನ ಪಡಪಯ್ಯ ಕಾಣುವ ಕನಸು. ಮುತಳಾಬಾಯಿ ತನ್ನ ಮತ್ತು ನಾನಾನ ನಡುವೆ ಇದ್ದ ಸಂಬಂಧದ ನೆನಪು. ಕಾದಂಬರಿಯ ಕೊನೆಯಲ್ಲಿ ಪಾದಸ್ಗೆ ಆಗಮಿಸುವ ದಾದಾ ಕಾಣುವ ಕನಸು ಮೊದಲಾದೆಡೆಗಳಲ್ಲಿ ಗುರ್ತಿಸಬಹುದು. ಇದಲ್ಲದೆ ಒಂದು ಚಿತ್ರವನ್ನು ಕೊಡುತ್ತಿರುವಾಗ ಅಲ್ಲಿಯ ಪಾತ್ರಗಳ ಮೂಲಕ, ಕಣ್ಮುಂದಿಲ್ಲದ ಇತರ ಪಾತ್ರಗಳ ಕ್ರಿಯೆಗಳ ಪ್ರಸ್ತಾಪದಂಥ ರಚನಾ ವಿಧಾನಗಳೂ ಇಲ್ಲಿವೆ.

ಘಟನೆಗಳನ್ನು ನಾಟ್ಯೀಕರಿಸುವಲ್ಲಿ, ಅಪರೂಪದ ಸೃಷ್ಟಿಯಲ್ಲಿ, ಪಾತ್ರಗಳ ಕಲ್ಪನೆಯಲ್ಲಿ ರಾವಬಹದ್ದೂರರು ಸಾಧಿಸಿದ ಕಲೆ ನಮ್ಮನ್ನು ತಲೆದೂಗಿಸುತ್ತವೆ ನಿಜ. ಆದರೂ ಪಾತ್ರಗಳಲ್ಲಿನ ಆಂತರಿಕ ತುಮುಲವನ್ನಾಗಲಿ, ಭಾವೋದ್ವೇಗಗಳನ್ನಾಗಲಿ, ದ್ವಂದ್ವಗಳ ಘರ್ಷಣೆಯನ್ನಾಗಲಿ ವ್ಯಕ್ತಿಗತವಾಗಿ ಚಿತ್ರಿಸುವ ನಿರೂಪಣೆಯ ದಾಟಿ ಇಲ್ಲಿ ಕಂಡುಬರುವುದಿಲ್ಲ " ಈ ದೃಷ್ಟಿಯಿಂದ ಎದ್ದುಕಾಣುವ ಕೊರತೆಯೆಂದರೆ ಧ್ವನಿಯನ್ನು ನಿಯಂತ್ರಿಸುವಲ್ಲಿಯ ಕಾದಂಬರಿಕಾರರ ಅಸಮರ್ಥನೆ ರಾವಬಹದ್ದೂರರ ಧ್ವನಿ ಸಾಮಾನ್ಯವಾಗಿ ಬಿಟ್ಟಿ ಬಿಕ್ಕೆಯ ವರದಿಗಾರನ ಧ್ವನಿಯಂತೆ ತೋರುತ್ತದೆ. ಅದರಲ್ಲಿ ಕಟ್ಟುನಿಟ್ಟಾದ ನಿರ್ಲಿಪ್ತತೆಯಾಗಲಿ ಅಥವಾ ಕಾದಂಬರಿಕಾರನ ವೈಶಿಷ್ಟ್ಯದಿಂದ ಹುಟ್ಟುವ ಅನನ್ಯತೆಯಾಗಲಿ ಕಂಡು ಬರುವುದಿಲ್ಲ". ಉದಾಹರಣೆಗೆ ಕಾದಂಬರಿಯ ಏಳನೇಯ ಅಧ್ಯಾಯದಲ್ಲಿ ಬರುವ ಈ ಭಾಗವನ್ನು ನೋಡಬಹುದು.

"ಚಿಮಣಾಳ ಕಣ್ಣೀರು ಅಖಂಡ ವರ್ಷಾಧಾರೆಯಂತೆ ಸುರಿಯುತ್ತಲೇ ಇದ್ದವು. ಭವಿಷ್ಯದ ಭೀಕರ ಚಿತ್ರ ಅವಳನ್ನು ಕೈಕಾಲುಗೆಡಿಸಿತ್ತು. ನಾನಾನ ಮರಣದಿಂದ ಹತಾಶಳಾದ ಅವಳ ಹೃದಯ ಆಗಲೇ ಬರಡು ಭೂಮಿಯಾಗಿತ್ತು. ಅಂಥದರಲ್ಲಿಯೂ, ಹೆದರಿದರೂ ದಾದಾನ ಬಗ್ಗೆ ಆಸೆಯಿಟ್ಟುಕೊಂಡಿದ್ದಳು. ಮೊದಲ ಗುಟಕಿಗೇ ಅವಳ ಜೀವನ ಅವಳ ಪಾಲಿಗೆ ಕಹಿ ವಿಷವಾಗಿತ್ತು. ನಾನಾನ ಪ್ರೀತಿಯ ರಕ್ಷೆಯಲ್ಲಿ ನಿಶ್ಚಿಂತಳಾಗಿದ್ದವಳು. ಹಳ್ಳಿಯಲ್ಲಿಯೇ ಎದ್ದು ಕಾಣುವ ತನ್ನ ಚೆಲುವಿನ ಬಗ್ಗೆ ಮುಗ್ಧ ಅಭಿಮಾನವನ್ನಿಟ್ಟುಕೊಂಡ ಮುಗ್ಧ ಕನ್ಯೆ, ಇಷ್ಟು ಜನರೆದುರು ವಿಚಾರಣೆಗೆ ಗುರಿಯಾಗಬೇಕಾಗಿತ್ತು, ಅದು ಮಾನರಕ್ಷಣೆಗಾಗಿಯಲ್ಲ. ಮುಂದೆ ಹುಟ್ಟಬಹುದಾದ ನಿಷ್ಪಾಪ ಕೂಸಿನ ತಂದೆ ಯಾರು ಎಂಬ ಸತ್ಯವನ್ನು ಪ್ರಸ್ಥಾಪಿಸುವುದಕ್ಕೆ. ಸತ್ಯವೇನೋ ಸ್ಥಾಪಿತವಾಯಿತು. ಅದರೇನು? ಹೆಣ್ಣಿನ ಮಲಿನವಾದ ಮಾನ ತಿಳಿಯಾಗಲು ಅದೇನು ಮಲೆತ ನೀರಲ್ಲ. ದೊರೆತ ಸತ್ಯದಿಂದ ನಿರ್ಣಾಯಕರಿಗೇನೋ ಸಮಾಧಾನವಾಗಿತ್ತು. ಆದರೆ ಹೆಣ್ಣಿನ ಅಂತಃಕರಣದ ಕನ್ನಡಿ ಚೂರುಚೂರಾಗಿ, ಆ ಚೂರುಗಳಲ್ಲಿ ಆ ಸತ್ಯದ ವಿಕೃತ ಪ್ರತಿಬಿಂಬ ಮೂಡಿತ್ತು".

ಇಂತಹ ಸನ್ನಿವೇಶದಲ್ಲಿಯೂ ಕೂಡ ಕಾದಂಬರಿಕಾರರು ಪಾತ್ರದ ಹೊರಗೆಯ ನಿಂತು ಮಾತಾಡುತ್ತಿರುವುದು ಆಶ್ಚರ್ಯವನ್ನು ಹುಟ್ಟಿಸುತ್ತದೆ. ವ್ಯಾಖ್ಯಾನ

# ಅಧ್ಯಾಯ-೭

# ಗ್ರಾಮಾಯಣ ಕಾದಂಬರಿಯ ಭಾಷೆ

[illegible] ಅವುಗಳಿಂದ ಬರುವ [illegible] ಅಂಗವಾಗುತ್ತದೆ. ಬಳಸುವ ಭಾಷೆ ಅವುಗಳಲ್ಲಿ ಅಂಗಗಳಿಗಿಂತ ಪ್ರಮುಖ ಸ್ಥಾನಪಡೆಯುತ್ತದೆ. ಏಕೆಂದರೆ ಈ ಎಲ್ಲ ಅಂಗಗಳ ಪರಿಭಾವನೆ ಮಾಡುವುದು ಮತ್ತು ಅಭಿವ್ಯಕ್ತಿಸುವುದು ಭಾಷೆಯ ಮೂಲಕವೇ ಆಗಿದೆ. ಅದ್ದರಿಂದ ಭಾಷೆಯು ಸೋಲು. ಅಷ್ಟೇ ಪ್ರಮಾಣದಲ್ಲಿ ಅವುಗಳ ಸೋಲೂ ಆಗುವುದರಿಂದ, ಅಭಿವ್ಯಕ್ತಿ ಪರಿಕರಗಳಲ್ಲಿ ಭಾಷೆಗೆ ಪ್ರಥಮಸ್ಥಾನ ಸಲ್ಲುತ್ತದೆ. ನಿರೂಪಣೆಯಲ್ಲಿ ಶಕ್ತಿಯುತವಾಗಿ ಭಾಷೆ ಹೇಗೆ ಬಳಕೆಯಾಗುತ್ತದೆಂಬುವುದೂ ಗಮನಾರ್ಹವಾಗುತ್ತದೆ. ಯಾವುದೇ ಅನುಭವವಾದರೂ ಓದುಗನಿಗೆ ಅದರ ಸಂವೇದನೆ ಭಾಷೆಯ ಮೂಲಕ ತಾನೆ ಆಗಾಗಿ ತಂತ್ರವಿನ್ಯಾಸ ಜೇಕಟ್ಟನ್ನು ಆಚ್ಛಾದಿಸಿಕೊಳ್ಳುವ ಭಾಷೆ ಅದನ್ನು ಮತ್ತಷ್ಟು ಉಜ್ವಲ ಗೊಳಿಸುವುದರ ಜೊತೆಗೆ ಅದರ ಅನಿವಾರ್ಯ ಅಂಗವೂ ಆಗುತ್ತದೆ.

'ಗ್ರಾಮಾಯಣ' ಕಾದಂಬರಿಯಲ್ಲಿ ಲೇಖಕರು ಆದರ್ಶ ಪ್ರಾಯವಾದ ಸರಳ ಭಾಷೆಯನ್ನು ಅವಲಂಬಿಸಿದ್ದಾರೆ. ಕ್ಲಿಷ್ಟತೆಗಾಗಲೀ, ಚಮತ್ಕಾರಕ್ಕಾಗಲಿ, ವೈಭವೀಕರಣಕ್ಕಾಗಲಿ ಇಲ್ಲಿ ಅವಕಾಶವಿಲ್ಲ. ಉತ್ಕಟ ಪ್ರಸಂಗಗಳಲ್ಲಿ ಸಹಜವಾಗಿಯೆ ಭಾಷೆ ಕಾವ್ಯಮಯವಾಗುತ್ತದೆ. ಅಲ್ಲಲ್ಲಿ ಸಹಜವಾದ ಉಪಮಾ-ರೂಪಕಗಳು, ಜಾಣ್ನುಡಿಗಳು ಭಾಷೆಯ ಕಾಂತಿಯನ್ನು ಹೆಚ್ಚಿಸುತ್ತವೆ. "ಹಣೆ, ಗದ್ದ, ಮೂಗು ಎಲ್ಲ ದಂತದಲ್ಲಿ ಕೊರೆದಿಟ್ಟಂತೆ ಹೊಳೆಯುತ್ತಿದ್ದವು," (ಪು-೨೦) "ಬಿಮಣಾಳ ರೂಪ ಹಾವಿನ ಹೆಡೆಯಲ್ಲಿನ ರತ್ನದಂತೆ" ಎಂಬ ಉಪಮೆಗಳು ಅತ್ಯಂತ ಸ್ವಾರಸ್ಯಪೂರ್ಣವಾಗಿವೆ. ಬಿಮಣಾ ದಾಸಪ್ಪಳೊಂದಿಗೆ ಮಠಕ್ಕೆ ಹೋದ ಸಂದರ್ಭ - "ಯಂತ್ರದಂತೆ ಬಿಮಣಾ ದಾಸಪ್ಪನನ್ನು ಅನುಸರಿಸಿದಳು. ಮಠದ ಅಂತರಂಗದ ಕೋಣೆಯಲ್ಲಿ ಕಾಲಿಟ್ಟಳು. ಕೇವಯ ವಸ್ತ್ರದ ಮೇಲೆ ವ್ಯಾಘ್ರಾಂಬರ ಹಾಸಿದ ಮಂಚದ ಮೇಲೆ ಸ್ವಾಮಿಗಳು ಸುಖಾಸೀನರಾಗಿದ್ದರು" ಎನ್ನುವಲ್ಲಿ 'ವ್ಯಾಘ್ರಾಂಬರ' ಎಂಬ ಪದ ಪದವಪ್ಪನ ವ್ಯಾಘ್ರತನದ ಸಂಕೇತವಾಗಿರುವುದಲ್ಲದೆ ಸಮಯೋಚಿತ ಪದವೂ ಆಗಿದೆ.

"ಗಂಡನ್ನ ಮದುವೆ ಮಾಡಿ ಹೊಳೆಗೆ ತಿನ್ನುವವನಲ್ಲ ಬಣವೆ ಸುಟ್ಟು ಅರಳು ತಿನ್ನುವ ಸ್ವಭಾವದವ" (ಪು-೭೭) "ಗಂಡ ಸ್ವಸ್ಥಾನದಲ್ಲಿ ನಿಂತು ಆನೆಯನ್ನು ಎಳೆದು

ಉತ್ತಮ ಮಾತುಗಾರರಾಗಿದ್ದಾರೆ. ಮಾದಾರ ಚನ್ನ ಒಬ್ಬ ಉತ್ತಮ ನಾಟಕೀ ಮನುಷ್ಯ. ಅವನ ಮಾತಿನ ಬಣ್ಣಗಾರಿಕೆಗೆ ಮರುಳಾಗದವರೇ ಇರಲಿಲ್ಲ. ಪಡದಪ್ಪನೊಂದಿಗಿನ ಸಂಭಾಷಣೆಯಲ್ಲಿ ಈ ಅಂಶವನ್ನು ಗುರುತಿಸಬಹುದು. "ಯಪ್ಪಾ, ಕರೇ ಹೇಳಿದರೂ ಕೇಳತೀ, ಸುಳ್ಳು ಹೇಳಿದರೂ ಕೇಳತೀ. ದೇವರ ಮುಂದ ಸುಳ್ಳ ಹೇಳಲ್ಯಾ ಯಪ್ಪಾ? ಗುಳೇ ಹೋಗುದು ಬರಾಯಿಸಿ ತರೇ ಅದಕ ಕಾಳು ತಿರುಗಿ ಕೊಟ್ಟು ರಿಣಾ ಮುಟ್ಟಿಸದರ ಪಾಪ ಅಗಾಕಿಲ್ಲರೇ? ಗೌಡರು ನಮ್ಮಂತವರ್ನ ಕಟ್ಟೆ ಕೇಳಗ ನಿಲ್ಲಗೊಡುಬಲ್ಲ. ಇನ್ನ ಕಾಳ ಕೊಟ್ಟಾರ್ರೇ? ಹಾಗಿದ್ದರ ನಿನ್ನ ಮಗಾ. ಇಲ್ಲಿ ಬಂದು ಬಕಾಳತಿದ್ದ ಯಪ್ಪಾ?" ಎಂದು ಸುಕ್ಕನ ಕಂತೆಯನ್ನು ಬಿಚ್ಚಿದ. "ಯಪ್ಪಾ, ನೀ ತಂದಿ, ನಾ ಮಗಾ; ನೀ ಕೇಸರ, ನಾ ನೀರ ಕಳ್ಳಿಯಾಗ ಬಿಟ್ಟೇತಂಯಪ್ಪಾ? ಇಂತಾ ಕೆಡಗಾಲದಾಗ ಅಪ್ಪನ ಪಾದಾಬಿಟ್ಟು ಅತ್ತಿತ್ತ ಹೋದಾನರೇ ಮಗಾ? ನೀ ಕೊಡಬೇಕು; ನಾ ಉಣಬೇಕು; ನೀ ಮುಂದ ಕರೀಬೇಕು; ನಾ ಬರಬೇಕು; ನೀ ಬಯ್ಯಬೇಕು, ನಾ ನಗಬೇಕು. (ಪುಟ೨) ಚನ್ನನ ಈ ಮಾತುಗಳಿಗೆ ಬಯಲಾಟದ ಭಾಷೆಯ ಲಯವಿದೆ.

ಮಠದಲ್ಲಿ ಇಪ್ಪತ್ತನಾಲ್ಕು ಘಂಟೆಯೂ ಧ್ಯಾನಮಗ್ನನಾದ ಕೆಂಚ ಗಾಂಜಿಯ ಅಮಲಿನಲ್ಲಿ ಲೋಕೋತ್ತರವಾದ ಕಾವ್ಯವನ್ನು ಸೃಷ್ಟಿಸಬಲ್ಲ. ಶಂಕರಪ್ಪಗೌಡರ ದರ್ಪದ್ಯೋತಕ ಮಾತುಗಾರಿಕೆ, ಚಂದ್ರಿಯ ಭಿನ್ನಾಣದ ನುಡಿಗಳು, ಪಡದಯ್ಯನವರ ಧಾಂಬಿಕತೆಯ ಮನ ಸೆಳೆಯುವ ವಾಗ್ವೈಖರಿ, ಶೇಷಪ್ಪನ ಕಾಯದೆ ಪಾಂಡಿತ್ಯದ ಉಕ್ತಿ ವೈಚಿತ್ರ್ಯ–ಇವೆಲ್ಲ ಸ್ವಾಭಾವಿಕವಾಗಿಯೇ ಬಣ್ಣಗೊಂಡು ಬಂದಿವೆ. ಆದರೆ ಫಕರುದ್ದೀನ ಸಾಹೇಬ, ಗಿಬ್ಸನ್‌ಸಾಹೇಬರು ಇಂಥ ಅನ್ಯದೇಶಿಯ ವ್ಯಕ್ತಿಗಳ ವಿಷಯದಲ್ಲಿ ಮಾತ್ರ ಸಂಭಾಷಣೆ ಯಶಸ್ವಿಯಾಗಿಲ್ಲ ಎಂಬುದು ಎಲ್ಲರೂ ಒಪ್ಪುವ ಅಂಶವಾಗಿದೆ.

# ಅಧ್ಯಾಯ-೮
# ಕಾದಂಬರಿಯ ಧೋರಣೆ

ರಾವಬಹಾದ್ದೂರರು ತಮ್ಮ ದೀರ್ಘ ಹಾಗೂ ಸಕ್ರಿಯ ಜೀವನದಲ್ಲಿ ಹಲವಾರು ಪಾತ್ರಗಳಲ್ಲಿ-ಸ್ವಾತಂತ್ರ್ಯ ಹೋರಾಟಗಾರ, ಪತ್ರಿಕಾಕರ್ತ, ಸಮಾಜಸೇವಕ, ರೈತ ಇತ್ಯಾದಿ ಕಾಣಿಸಿಕೊಂಡವರು. ಸಾಮಾನ್ಯ ಕೃಷಿ ಕುಟುಂಬದಿಂದ ಬಂದ ಲೇಖಕರು ಅಹಿಂಸಾಮೂರ್ತಿಯಂತಿದ್ದ ಅವರ ಅಜ್ಜ ಹೇಳುತ್ತಿದ್ದ ಕಥೆಗಳು, ಚಿಕ್ಕಂದಿನಿಂದಲೂ ಕೇಳುತ್ತಿದ್ದ ಪುರಾಣ ಕಥೆಗಳು, ಗಾಂಧೀಜಿಯವರ ತತ್ತ್ವಗಳು-ಇವೆಲ್ಲವುಗಳ ಪ್ರಭಾವದಲ್ಲಿ ಬೆಳೆದವರು. ರೈತರಾಗಿ ಹುಟ್ಟಿ ಮಣ್ಣಿನಲ್ಲಿ ದುಡಿಯುವ ಸಂಕಲ್ಪದಿಂದಿದ್ದ ರಾವ್‌ಬಹದ್ದೂರ್‌ರವರು ಆಕಸ್ಮಿಕವಾಗಿ ಸಾಹಿತ್ಯ ಕೃಷಿಯಲ್ಲಿ ತೊಡಗಿಸಿಕೊಂಡವರು. ಪ್ರೀತಿ-ಪ್ರೇಮದ ವಿಚಾರವನ್ನು ಬಿಟ್ಟು ಹೊಸದಾಗಿ ಏನಾದರೂ ಬರೆಯಬೇಕೆಂಬ ಹಂಬಲವುಳ್ಳ ಇವರು ಆ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗುತ್ತಾರೆ. ಜಗತ್ತಿನಲ್ಲಿರುವ ಪ್ರೀತಿ-ಪ್ರೇಮ, ಅದಕ್ಕಾಗಿ ಮಡಿಯುವ ವ್ಯಕ್ತಿಗಳನ್ನು ಚಿತ್ರಿಸುವುದೇ ಕಾದಂಬರಿಯ ಉದ್ದೇಶವಲ್ಲ. ಪ್ರೀತಿಯ ಹೊರತಾಗಿ ಮನುಷ್ಯನನ್ನು ಕಾಡುವ ಸಮಸ್ಯೆಗಳು ಸಾಕಷ್ಟಿವೆ. ಅಂಥ ಸಮಸ್ಯೆಗಳನ್ನು ಕಾದಂಬರಿಯ ವಸ್ತುವಿಷಯವಾಗಿ ಆಯ್ಕೆ ಮಾಡಿಕೊಳ್ಳಬೇಕಿದೆ. ಎಂಬ ನಿಲುವುಳ್ಳ ರಾವಬಹದ್ದೂರರಿಂದ ರಚಿತವಾದ ಕೃತಿಯೇ 'ಗ್ರಾಮಾಯಣ' "ಲೈಂಗಿಕ ಸಮಸ್ಯೆಯನ್ನು ಚರ್ಚಿಸದಿದ್ದರೂ ಕಾದಂಬರಿ ಲೋಕಪ್ರಿಯವಾಗಬಲ್ಲದು: ಅದರಲ್ಲಿ ಬಂದ ಜೀವನ ಚಿತ್ರ ಮಾನವೀಯ ಸಹಾನುಭೂತಿಯಿಂದ ತುಂಬಿದ್ದರೆ ಮಾತ್ರ ಸಾಕು"[1] ಎಂಬ ಲೇಖಕರ ನುಡಿ ಈ ಕಾದಂಬರಿ ರಚನೆಯ ಹಿಂದಿರುವ ಆಶಯ, ಧೋರಣೆಗಳು ಎಂಥದ್ದು, ಎಂಬುದನ್ನು ಮನವರಿಕೆ ಮಾಡಿಕೊಡುತ್ತದೆ.

ಗ್ರಾಮೀಣ ಪರಿಸರದ ದಟ್ಟ ಪ್ರಭಾವದಲ್ಲಿ ಬೆಳೆದ ಲೇಖಕರು ತಮ್ಮ ಕಾದಂಬರಿಯಲ್ಲೂ ಒಂದು ಸಮಗ್ರ ಗ್ರಾಮೀಣ ಬದುಕನ್ನು ಜೀವಂತವಾಗಿ ಕಟ್ಟಿಕೊಡುವಲ್ಲಿ ಯಶಸ್ವಿಯಾಗಿದ್ದಾರೆ. ಒಂದು ಆದರ್ಶಯುತ ಮೌಲ್ಯಗಳಿಂದ ಕೂಡಿದ ಗ್ರಾಮದ ಚಿತ್ರಣಕ್ಕೆ ಬದಲಾಗಿ ಹಲವು ಜಾತಿಗಳಿಂದ ಒಡೆದು ಹೋಗಿರುವ ಸಮಾಜದ ಚಿತ್ರ ಇಲ್ಲಿದೆ. ಆದರೆ ಯಾವುದೋ ಒಂದು ಜಾತಿಯನ್ನು ಓಲೈಸುವ ಅಥವಾ ಹೀಯಾಳಿಸುವ ಅಂಶ ಕಂಡುಬರುವುದಿಲ್ಲ. ಅದು ಲೇಖಕರ ಉದ್ದೇಶವೂ ಅಲ್ಲ. ಒಂದು ಹಳ್ಳಿಯ ಜೀವನ, ಅಲ್ಲಿನ ವ್ಯಕ್ತಿಗಳ ಪರಸ್ಪರ ಅಹಂಕಾರ, ಪ್ರತಿಷ್ಠೆ, ಸ್ವಾರ್ಥ, ಹಠಗಳಿಂದ ಹೇಗೆ ದುರಂತಕ್ಕೆ ಒಳಗಾಗುತ್ತದೆಂಬುದನ್ನು ಚಿತ್ರಿಸಿದ್ದಾರೆ. ಸಮಾಜ ಕಂಟಕರ ಗುಂಪು ಒಂದೆಡೆಯಾದರೆ ಆದರ್ಶ ಸಮಾಜದ ಕನಸಿಗರು ಮತ್ತೊಂದೆಡೆ. ಈ ಎರಡೂ ವರ್ಗಗಳಿಂದ ಕೂಡಿದ ಸಮಾಜ, ಅಲ್ಲಿ ನಡೆಯುವ

ಬಂದರೂ ಪಾಪ-ಪುಣ್ಯದ ಬಗೆಗೆ ವಿಶ್ಲೇಷಿಸಿ, ತೀರ್ಪು ತಿಳಿಸುವ ಪ್ರಯತ್ನವನ್ನು ಕಾದಂಬರಿ ಮಾಡುವುದಿಲ್ಲ. ಅವರ ಪಾತ್ರಗಳ ಕಥೆಯಲ್ಲಿ ತಂತಾನೆ ವ್ಯಕ್ತವಾಗುತ್ತದೆ.

ಗ್ರಾಮಾಯಣ ಕಾದಂಬರಿಯಲ್ಲಿ ಯಾವ ಘಟನೆಯೂ ಅನಗತ್ಯವಾಗಿ ಕಂಡುಬರುವುದಿಲ್ಲ. ಹಿರಿಯರು ಪ್ರತಿಷ್ಠಿತರು, ಹಣವಂತರು, ಶಾಸ್ತ್ರಗಳನ್ನು ಬಲ್ಲವರು– ಎಲ್ಲರ ಮಧ್ಯೆ ಏನೂ ತಿಳಿಯದ ದೀನ ಮುಗ್ಧವ್ಯಕ್ತಿ ಅಳುಬುರುಕ ಲಕ್ಷ್ಮಣನ ಬಾಯಿಯಿಂದ ನಿಜವಾದ ವಿವೇಕದ ವಾಣಿ ಕೇಳುತ್ತದೆ: "ತಪ್ಪು ಮಾಡಿದವರಿಗೆಲ್ಲ ಶಿಕ್ಷಾ ಆಗಬೇಕು ಎಪ್ಪಾ. ಅದು ದೇವರ ನ್ಯಾಯ". ಈ ನಿಶ್ಚಳವಾದ ಮಾರ್ಗವನ್ನು ಮರೆತು ತಮ್ಮ ಮತ್ತು ಗ್ರಾಮದ ವಿನಾಶದ ಹಾದಿಯನ್ನು ನಿರ್ಮಿಸುತ್ತಾರೆ. ಪ್ರತಿಯೊಬ್ಬನ ಅಂತರಂಗದಲ್ಲೂ ಒಳ್ಳೆಯದು ಮತ್ತು ಕೆಟ್ಟುದರ ಸಹಜೀವನ ನಡೆಯುತ್ತಿರುತ್ತದೆಯೆಂಬ ಸಂಗತಿ ಇಲ್ಲಿದೆ. ಆದರೂ ಒಳ್ಳೆಯದಕ್ಕಿಂತ ಕೆಟ್ಟ ಆಲೋಚನೆಗಳು, ನಡವಳಿಕೆಗಳೇ ವಿಜೃಂಭಿಸುತ್ತವೆ. ಇಂಥ ಸಂದರ್ಭದಲ್ಲಿ ದುಷ್ಟಶಕ್ತಿಗಳ ವಿರುದ್ಧ ಹೋರಾಡಲು ಒಬ್ಬನಿಂದ ಸಾಧ್ಯವಿಲ್ಲ. ಹಾಗಾಗೀ ಬಾಳಾ ಚಾರ್ಯರು ಪಾದಕ್ಕಿಯ ಜಂಜಡದ ನಡುವೆ ಶಕ್ತಿಮೀರಿ ಹೋರಾಡಿ ಕೊನೆಗೆ ಸೋತು ಹೋಗುತ್ತಾರೆ. ಇಲ್ಲಿ ಕೆಡುಕಿಗೆ ಎಲ್ಲ ರೀತಿಯಲ್ಲಿ ಜಯ ದೊರೆಯುತ್ತಾ ಹೋಗಿ ಕೊನೆಗೆ ಒಳಿತಿನ ಜೊತೆಗೆ ಕೆಡುಕೂ ನಾಶವಾಗುತ್ತದೆ. ಅತಿಯಾದ ತಂತ್ರಗಾರಿಕೆ, ಪಕ್ಷ ಪಂಗಡಗಳು, ಅನೈಕ್ಯತೆಯಿಂದ ಪಾದಕ್ಕಿಯ ಜೀವನ ರೋಗಗ್ರಸ್ತವಾಗಿದ್ದು, ಹೊರಗಿನ ಒತ್ತಡಕ್ಕೆ ಗುರಿಯಾಗಿ ಅದು ಸಂಪೂರ್ಣವಾಗಿ ನಾಶವಾಗಿ ಹೋಗುವುದನ್ನು ಪ್ರವಾಹ, ಪ್ಲೇಗು, ಬಿರುಗಾಳಿಗಳಂಥ ವಾಸ್ತವಿಕ ಸಂಗತಿಗಳು ಸಾಂಕೇತಿಕವಾಗಿ ಹೇಳುತ್ತವೆ. ಇಲ್ಲಿ ಕೆಡುಕು ತನ್ನ ದೌರ್ಬಲ್ಯದಿಂದ ಮಾತ್ರವಲ್ಲದೆ ಪ್ರಕೃತಿಯ ವಿಕೋಪಕ್ಕೆ ಗುರಿಯಾಗಿ ನಾಶವಾಗುತ್ತದೆ ಎಂಬುದನ್ನು ಸೂಚಿಸುತ್ತದೆ.

ನ್ಯಾಯ, ನೀತಿ ಸತ್ಯ–ಇವು ಸಾರ್ವಕಾಲಿಕ ಮೌಲ್ಯಗಳಾಗಿವೆ. ಎಷ್ಟೇ ಮುಚ್ಚಿಟ್ಟರು ಅನ್ಯಾಯ ಬಯಲಿಗೆ ಬಂದೇ ಬರುತ್ತದೆ. ಹಾಗಾಗಿ 'ಒಂದು ನ್ಯಾಯ ಹಿಂದಿನ ಸಾವಿರ ಅನ್ಯಾಯಗಳನ್ನು ಬಯಲಿಗೆಳೆದರೂ ಅಡ್ಡಿಯಿಲ್ಲ. ಅನ್ಯಾಯದಿಂದ ಅನ್ಯಾಯವನ್ನು ಮುಚ್ಚಿ ಸುಖವಾಗಿ ಬದುಕಬಹುದು. ಆದರೆ ಈ ಎರಡು ಅನ್ಯಾಯಗಳ ನಡುವೆ ಒಂದು ಮನುಷ್ಯ ಜೀವ ವಿಲಿವಿಲಿ ಒದ್ದಾಡುತ್ತಿರುತ್ತದೆ. ಮನುಷ್ಯತ್ವದ ಹಸಿದ ಕರುಳೊಂದು ನೋಯುತ್ತಿರುತ್ತದೆ. ಎಷ್ಟೇ ದುಃಖವಾದರೂ ಅಡ್ಡಿಯಿಲ್ಲ. ನ್ಯಾಯದಿಂದಲೇ ವರ್ತಿಸಬೇಕು' ಎಂಬ ಸಂದೇಶವನ್ನು ಶಂಕರಪ್ಪಗೌಡ ಪಾತ್ರದ ಮೂಲಕ ಹೇಳಿಸುತ್ತಾರೆ.

ಸರ್ವನಾಶದ ನಂತರದಲ್ಲಿಯೇ ಹೊಸ ಸೃಷ್ಟಿಯಾಗುತ್ತದೆಂಬ ನಂಬಿಕೆ ಇಲ್ಲಿದೆ. ಪಾದಕ್ಕಿ ಮತ್ತೆ ಮೊದಲಿನಂತಾಗಬಹುದೆಂಬ ಆಸೆಯನ್ನು ಕಾದಂಬರಿ ನಮ್ಮಲ್ಲಿ ಮೂಡಿಸುತ್ತದೆ.

“ಕೊನೆಯಲ್ಲಿ ಬರುವ ಪ್ರಳಯದ ವಸ್ತುಪಿಸ ಚಿತ್ರವೇ ಕೊನೆಯಲ್ಲ; ಅದರಲ್ಲಿಯೂ ಬರುವ ಮನ್ವಂತರದ ಬೀಜಗಳು ಅಡಗಿವೆ” ಎಂದು ಕಾದಂಬರಿಕಾರರೇ ಆಶ್ವಾಸನೆ ನೀಡುತ್ತಾರೆ. ಕಾದಂಬರಿಯ ಕೊನೆಯಲ್ಲಿ ಹಾದಳ್ಳಿಯನ್ನು ನೋಡಲು ಬರುವ ದಾದಾನ ಆಲೋಚನೆಗಳು ಇದಕ್ಕೆ ಪುಷ್ಟಿಯನ್ನು ಕೊಡುತ್ತವೆ. “ದ್ವೇಷಕ್ಕಿರುವ ಶಕ್ತಿ ಪ್ರೇಮಕ್ಕೆ ಇಲ್ಲವೇ ಇಲ್ಲ. ದ್ವೇಷ ಹುಟ್ಟಿದರೆ ಸುಡುವ ಬೆಂಕಿ: ಪ್ರೇಮ ಹುಟ್ಟಿ ಬೆಳೆದು, ಬಾಳಬೇಕಾದ ಜೀವನ. ಅಂತಲೇ ಅದು ರೂಪುಗೊಳ್ಳುವುದಕ್ಕೆ ದೀರ್ಘಾವಧಿ ಕಾಲಬೇಕು” (ಪು-೨೫೧) ಎಂಬ ಬಾಳಾಚಾರ್ಯರು ಆಡುವ ಮಾತನ್ನು, ದ್ವೇಷ ಈರ್ಷ್ಯೆಯಿಂದ ಹಾಳಾದ ಹಾದಳ್ಳಿಯಲ್ಲಿ ಮತ್ತೆ ಪ್ರೀತಿ, ವಿಶ್ವಾಸ, ನಂಬಿಕೆ ಬೆಳೆಯಬೇಕೆಂದರೆ ಕಾಲಾವಕಾಶ ಬೇಕಾಗುತ್ತದೆಂಬುದಕ್ಕೂ ಅನ್ವಯಿಸಬಹುದು ಈರ್ಷ್ಯೆಯಿಂದ ಯಾರಿಗೂ ಸುಖವಿಲ್ಲವೆಂಬ ಸಂದೇಶವೂ ಇಲ್ಲಿದೆ.

ಭ್ರಷ್ಟಾಚಾರ ಲಂಚಗುಳಿತನ, ದಬ್ಬಾಳಿಕೆ, ಶೋಷಣೆ–ಇವು ಹಿಂದೆಯೂ ಇತ್ತು, ಈಗಲೂ ಇದೆ, ಮುಂದೆಯೂ ಇರುವ ಸಾರ್ವತ್ರಿಕ, ಸಾರ್ವಕಾಲಿಕ ಸಮಸ್ಯೆಗಳಾಗಿವೆ. ಇವುಗಳನ್ನು ನಿರ್ಮೂಲನೆ ಮಾಡುವ ಪ್ರಯತ್ನವೂ ಜೊತೆ ಜೊತೆಗೆ ನಡೆಯುತ್ತಾ ಬಂದಿದೆ. ಈ ಸಮಸ್ಯೆಗಳು ಇಂದು ಎಲ್ಲಾ ಕ್ಷೇತ್ರವನ್ನು ಆವರಿಸಿವೆ. ಹಾಗಾಗೀ ಕೋರ್ಟು ಕಛೇರಿ ಅಂತ ಅಲೆಯುವುದರಿಂದ ನ್ಯಾಯಸಿಗುತ್ತದೆಂದು ಹೇಳಲಾಗದು. ಅದರಿಂದ ವೃಥಾ ಕಾಲಹರಣ, ಹಣಖರ್ಚು ಕೊನಗೆ ಮನೆ–ಮಠ ಆಸ್ತಿಯನ್ನು ಕಳೆದುಕೊಳ್ಳಬೇಕಾಗುತ್ತದೆ. ‘ಸರಕಾರಿ ಕಛೇರಿ ಕಟ್ಟಿ ಅಂದರ ಬಕಾಸುರನ ಹೊಟ್ಟಿ’ ಎಂಬ ಶೇಷಪ್ಪನ ಮಾತು, ‘ಈ ನ್ಯಾಯದೊಳಗ ನನಗೇನು ಸುಖಾ ಕಾಣವಲ್ಲದು ಇಂಥಾ ನ್ಯಾಯ ನಡನಡದ ಊರ ಪರಿಸ್ಥಿತಿ ಹೀಂಗ ಗೊಂದಲಗೆಟ್ಟದ್ದು’ ಎಂಬ ಆಚಾರ್ಯರ ಮಾತು ಸಮಕಾಲೀನ ಸಮಸ್ಯೆಗಳ ಮೇಲೆ ಬೆಳಕುಚೆಲ್ಲುತ್ತವೆ.

ಸರ್ಕಾರಿ ಅಧಿಕಾರಿವರ್ಗದವರು ಸಾಮಾನ್ಯ ಮನುಷ್ಯರ ಮೇಲೆ ಅದರಲ್ಲೂ ಸ್ತ್ರೀಯರ ಮೇಲೆ ನಡೆಸುವ ಶೋಷಣೆಯನ್ನು ನೈಜವಾಗಿ ಚಿತ್ರಿಸಿದ್ದಾರೆ. ಫೌಜುದಾರ, ಹವಾಲ್ದಾರ, ಶಿರಸ್ತೇದಾರ, ಅಸಿಸ್ಟೆಂಟ್ ಕಲೆಕ್ಟರ ಮೊದಲಾದ ಅಧಿಕಾರಿಗಳು ಹಳ್ಳಿಗೆ ಆಗಮಿಸಿದರೆ ಗಜನಿ ಮಹಮದನ ದಾಳಿ ಬಂದಂತೆ ಜನ ಅಂಜಿ ನಡುಗುತ್ತಿದ್ದರು. ಆ ಪರಿವಾರ ಊರು ಬಿಡುವವರೆಗೆ ಊರಲ್ಲಿ ಯಾರಿಗೂ ನಿದ್ದೆ ಹತ್ತುತ್ತಿರಲಿಲ್ಲ. ಅವರಿಗೆ ಸರಬರಾಯಿ ವ್ಯವಸ್ಥೆ ಮಾಡಲು ಬಡರೈತರಿಗೆ ಸೇರಬೇಕ್ಕಿದ್ದ ಸಾಲಹಣದಲ್ಲಿ ಸ್ವಲ್ಪ ಹಣವನ್ನು ಕಸಿದುಕೊಳ್ಳಲಾಗುತ್ತಿತ್ತು. ಅವರ ದರ್ಪ ದೌರ್ಜನ್ಯಕ್ಕೆ ಜನ ನಡುಗಿ ಹೋಗುತ್ತಿದ್ದರು. ಎಮ್ಮೆ ಸತ್ತಿತೆಂದು ಸುಳ್ಳು ಹೇಳಿದ ಒಂದು ಸಣ್ಣ ತಪ್ಪಿಗೆ ಬಡಸಂಗಪ್ಪ ನೂರು ರೂಪಾಯಿ ದಂಡ ಕಟ್ಟುತ್ತಾನೆ. ತನ್ನ ಅತ್ತಿಗೆ ಕಾಯಿಲೆಯಿಂದ ನರಳುತ್ತಿದ್ದಾಳೆಂದು ತನ್ನನ್ನು ಬಿಡಬೇಕೆಂದು ಬೇಡಿಕೊಂಡರೂ ಬಿಡದೆ ಆಕೆಯನ್ನು ತನ್ನ ಕಾಮತೃಷೆಗೆ ಬಳಸಿಕೊಳ್ಳುವ ಅಮಾನವೀಯತೆ.

ತನ್ನ ಎದುರು ವಿನಯವಂತಿಕೆಯಿಂದ ನಡೆದುಕೊಳ್ಳಲಿಲ್ಲವೆಂಬ ಕಾರಣಕ್ಕೆ ದಾದಾನ ಮೇಲೆ ಸೇಡು ತೀರಿಸಿಕೊಳ್ಳಲು ಹವಣಿಸುವ ಅಮಲ್ದಾರ. ಪೂರ್ವಾಪರಯೋಚಿಸದೆ ಗಿಬ್ಸನ್ ಸಾಹೇಬರು ಕೊಟ್ಟ ಅವೈಜ್ಞಾನಿಕ ತೀರ್ಮಾನ-ಇವೆಲ್ಲವೂ ಅಧಿಕಾರವರ್ಗದವರು ನಡೆಸುವ ದೌರ್ಜನ್ಯಕ್ಕೆ ಸಾಕ್ಷಿಗಳಾಗಿವೆ.

ಸಮಾಜದ ಕೆಳವರ್ಗದವರಲ್ಲಿ ಕಂಡುಬರುವ ಸಂಬಂಧಗಳ ಗಾಢತೆ. ಆತ್ಮೀಯತೆ ಮೇಲ್ವರ್ಗದವರಲ್ಲಿ ಕಾಣಲು ಸಾಧ್ಯವಿಲ್ಲ. ದಿಕ್ಕಿಲ್ಲದ ಹೆಣ್ಣುಮಗಳನ್ನು ಕರೆತಂದು ತಮ್ಮ ಮನೆಯಲ್ಲಿ ಆಶ್ರಯ ಕೊಟ್ಟ ಚಂದ್ರಿ. ತನ್ನ ತಂಗಿಯ ದುಃಖವನ್ನು ಸಮಾಧಾನಗೊಳಿಸಲು "ಯವ್ವಾ. ತಾಯಿನ್ನ ಕಳಕೊಂಡ ಕೂಸು ಮಲ್ಲಿ ಬೆಳಸುತ್ತಾಳ ಯವ್ವಾ! ಆ ಕೂಸಿನ್ನ ದೊಡ್ಡದು ಮಾಡೋ ಹೊಣೆ ನಂದು ಯವ್ವಾ!" (ಪು-[illegible]) ಎಂದು ಹೇಳುವ ಚನ್ನು; ನನ್ನ ಅಣ್ಣನ ಹೆಂಡತಿಗೆ ಕಾಯಿಲೆ ಬಂದಿದೆ ಎಂದು ಬಿಕ್ಕಿಬಿಕ್ಕಿ ಅಳುವ ಮಲ್ಲಿ ಇವರೆಲ್ಲ ಮಾನವೀಯತೆ. ಮತ್ತು ಸಂಬಂಧಗಳ ತುಡಿತವನ್ನು ಕಾಣಬಹುದು. ಅದರೆ ವಿವೇಕಿಗಳೂ ಹಿರಿಯರೂ ಆದ ಆಚಾರ್ಯರು ಅಲ್ಪ ವಿಷಯಕ್ಕೆ ತಮ್ಮ ಸೋದರನ ಮಗನೊಟ್ಟಿಗೆ ಕಲಹ ಮಾಡಿಕೊಂಡಿರುತ್ತಾರೆ. ದಾದಾ ಮತ್ತು ಜಮುನಾ. ಸುತಳಾ ಮತ್ತು ಬಾಪೂ ಸಾಹೇಬ ಇವರುಗಳ ಸಂಬಂಧ ಅವರಷ್ಟು ತೀವ್ರವಾಗಿಲ್ಲವೆಂದೆನಿಸುತ್ತದೆ. ಆದರೂ ಇವರ ಕಾದಂಬರಿಯಲ್ಲಿ ಹಾಸುಹೊಕ್ಕಾಗಿ ಬರುವ ಸಾಮಾಜಿಕ ಪ್ರಜ್ಞೆಯನ್ನು ನಿರ್ಲಕ್ಷಿಸುವಂತಿಲ್ಲ. ಇಲ್ಲಿ ಪಾತ್ರಗಳು ವೈಯಕ್ತಿಕ ಕಥೆಗಿಂತಲೂ ಹೆಚ್ಚಾಗಿ ಸಾಮಾಜಿಕ ಸಮಸ್ಯೆಗಳನ್ನೇ ಎದುರು ಹಾಕಿಕೊಳ್ಳುತ್ತವೆ. ವ್ಯಕ್ತಿಗೂ ಸಮಾಜಕ್ಕೂ ಇರುವ ಸಂಬಂಧ ಅತ್ಯಂತ ಅನಿವಾರ್ಯ ಮಾತ್ರವಲ್ಲ. ಸಂಕೀರ್ಣವೂ ಹೌದು. ವ್ಯಕ್ತಿಯ ವೈಯಕ್ತಿಕ ಮೌಲ್ಯಗಳಿಗೂ ಅದೇ ವ್ಯಕ್ತಿಯ ಸಾಮಾಜಿಕ ಮೌಲ್ಯಗಳಿಗೂ ಇರುವ ಸಾದೃಶ್ಯ ಅಥವಾ ಅಂತರ ಆತನ ವರ್ತನೆಗಳನ್ನು ನಿರ್ಧರಿಸುತ್ತದೆ. ನಿಯಂತ್ರಿಸುತ್ತದೆ. ಕಾದಂಬರಿ ನೇರವಾಗಿ ಯಾವ ಮೌಲ್ಯಗಳನ್ನು ಪ್ರತಿಪಾದಿಸದಿದ್ದರೂ ಕೆಲವು ಪಾತ್ರಗಳ ವ್ಯಕ್ತಿತ್ವದಲ್ಲಿ. ನಡತೆಯಲ್ಲಿ ಯಾವುದು ಸರಿ. ಯಾವುದು ತಪ್ಪು ಎಂಬುದರ ಅರಿವು ತಂತಾನೆ ಓದುಗರಿಗೆ ಮನವರಿಕೆಯಾಗುತ್ತದೆ.

ಒಟ್ಟಾರೆ 'ಗ್ರಾಮಾಯಣ' ಕಾದಂಬರಿಯು ಓದುಗರಿಗೆ ಒಂದು ಸಮಾಜದ ವಿಘಟನೆಯ ದರ್ಶನವನ್ನು ಮಾಡಿಸುತ್ತದೆ.

---

ಅಡಿಟಿಪ್ಪಣಿ
೧. ರಾವಬಹಾದ್ದೂರ. ಗ್ರಾಮಾಯಣ. ನನ್ನ ಮಾತು ಪು-೧೭

# ಉಪಸಂಹಾರ

'ರಾವಬಹದ್ದೂರರ ಗ್ರಾಮಾಯಣ' ಎಂಬ ಶೀರ್ಷಿಕೆಯಡಿಯಲ್ಲಿ 'ಗ್ರಾಮಾಯಣ' ಕಾದಂಬರಿಯನ್ನು ಕುರಿತು ವಿಸ್ತೃತವಾಗಿ ಅಧ್ಯಯನ ಮಾಡಲಾಗಿದೆ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ 'ರಾವಬಹದ್ದೂರ' ಎಂದರೆ 'ಗ್ರಾಮಾಯಣ'. 'ಗ್ರಾಮಾಯಣ' ಎಂದರೆ ರಾವಬಹದ್ದೂರ ಎನ್ನುವಷ್ಟರ ಮಟ್ಟಿಗೆ ಖ್ಯಾತಿಯನ್ನು ತಂದು ಕೊಟ್ಟ ಕನ್ನಡದ ಶ್ರೇಷ್ಠ ಕಾದಂಬರಿಗಳಲ್ಲಿ ಒಂದಾದ ಗ್ರಾಮಾಯಣದ ವಿಶೇಷತೆಯನ್ನು ಗುರುತಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಅದಕ್ಕೆ ಅನುಗುಣವಾಗುವಂತೆ ಕಥಾವಸ್ತು, ಸನ್ನಿವೇಶರಚನೆ, ಪಾತ್ರಚಿತ್ರಣ, ಸಾಮಾಜಿಕ ಮತ್ತು ಸಾಂಸ್ಕೃತಿಕ ಚಿತ್ರಣ, ಕಾದಂಬರಿಯ ತಂತ್ರವಿನ್ಯಾಸ, ಭಾಷೆ, ಧೋರಣೆ–ಹೀಗೆ ಅಧ್ಯಾಯಗಳಾಗಿ ವಿಭಾಗಿಸಿಕೊಂಡು ಆಯಾ ಅಧ್ಯಾಯದ ವಿಷಯಗಳನ್ನು ಸಾಕಷ್ಟು ವಿಸ್ತೃತವಾಗಿ ಪರಿಶೀಲಿಸಲಾಗಿದೆ. ಪ್ರಾರಂಭದಲ್ಲಿ ಕನ್ನಡಕ್ಕೆ ಶ್ರೇಷ್ಠ ಕಾದಂಬರಿಯೊಂದನ್ನು ನೀಡಿದ ರಾವಬಹದ್ದೂರರ ಬದುಕು ಮತ್ತು ಅವರ ಸಾಹಿತ್ಯ ಕೃಷಿಯ ಬಗ್ಗೆ ವಿವರಿಸಲಾಗಿದೆ.

ಆರುನೂರು ಪುಟಗಳಷ್ಟು ವಿಸ್ತಾರವಾದ ಈ ಕಾದಂಬರಿಯ ಕಥಾವಸ್ತುವನ್ನು ಹತ್ತನ್ನೆರಡು ಪುಟಗಳಲ್ಲಿ ಸಂಕ್ಷಿಪ್ತವಾಗಿ ಚಿತ್ರಿಸುವ ಪ್ರಯತ್ನವೆಂದು ತಿಳಿಯಬಹುದು. ಈ ಕಾದಂಬರಿಯಲ್ಲಿ ಹತ್ತಾರು ಘಟನೆಗಳು, ಸನ್ನಿವೇಶಗಳು ಕೃತಿಯುದ್ದಕ್ಕೂ ಹರಡಿಕೊಂಡಿರುವುದಲ್ಲದೆ ಒಂದೇ ಘಟನೆಯೊಳಗಿಂದ ಹತ್ತಾರು ಘಟನೆಗಳು ಕವಲೊಡೆಯುತ್ತಾ ಸಾಗಿದ್ದು, ಸರಪಳಿಯೋಪಾದಿಯಲ್ಲಿ ಒಂದಕ್ಕೊಂದು ಸಂಬಂಧದಿಂದ ಹೆಣೆದುಕೊಂಡಿವೆ. ಹಾಗಾಗಿ ಮುಖ್ಯವಾದ ನಾಲ್ಕು ಘಟನೆಗಳನ್ನು ಮಾತ್ರ ಸನ್ನಿವೇಶರಚನೆಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದ್ದು, ಅವು ಹೇಗೆ ಇತರ ಘಟನೆಗಳಿಗೆ ಕಾರಣವಾಗುತ್ತಾ ಸಾಗಿವೆ ಎಂಬುದನ್ನು ಮತ್ತು ಅವುಗಳಿಂದಾದ ಪರಿಣಾಮಗಳ ಬಗೆಗೂ ಚರ್ಚಿಸಲಾಗಿದೆ.

ಕಾದಂಬರಿಯಲ್ಲಿ ನಡೆಯುವ ಎಲ್ಲಾ ದುರಂತಗಳಿಗೆ ಅಲ್ಲಿ ಬರುವ ಪಾತ್ರಗಳು ಕೇಂದ್ರಬಿಂದುವಾಗಿವೆ. ದುರಂತಕ್ಕಷ್ಟೇ ಅಲ್ಲ ಅದರಿಂದ ಪಾರಾಗಲಿಕ್ಕೂ ಆ ಪಾತ್ರಗಳೇ ಮೂಲ ಆಗುವುದರಿಂದ ಅಲ್ಲಿ ಬರುವ ಎಲ್ಲಾ ಪಾತ್ರಗಳನ್ನು ಕುರಿತು ಚರ್ಚಿಸುವ ಬದಲು ಪ್ರಾತಿನಿಧಿಕವಾಗಿ ಕೆಲವು ಮುಖ್ಯ ಪಾತ್ರಗಳ ಗುಣ–ಸ್ವಭಾವಗಳನ್ನು ವಿಸ್ತಾರವಾಗಿ ಚಿತ್ರಿಸಲಾಗಿದೆ. ಅದರ ಜೊತೆಗೆ ಒಂದು ಗ್ರಾಮದ ಅವಸಾನಕ್ಕೆ ಅಲ್ಲಿನ ವ್ಯಕ್ತಿಗಳ ಸ್ವಾರ್ಥ, ದ್ವೇಷಗಳು ಹೇಗೆ ಕಾರಣವಾಗುತ್ತವೆ ಎಂಬುದನ್ನು ವಿವರವಾಗಿ ನಿರೂಪಿಸಲಾಗಿದೆ. ಇದಲ್ಲದೆ ಈ ಕಾದಂಬರಿಯಲ್ಲಿ ಬರುವ ಪಾತ್ರಗಳ ಸಾದೃಶ್ಯ ವೈದೃಶ್ಯಗಳನ್ನು ಗುರುತಿಸುವ ಪ್ರಯತ್ನವೂ

ಇದೆ. ಉತ್ತರ ಕರ್ನಾಟಕದಲ್ಲಿನ ಸಾಮಾಜಿಕ ಜನಜೀವನ ಮತ್ತು ಅವರು ಆಚರಿಸುವ ಹಬ್ಬಹರಿದಿನಗಳ ವಿವರಣೆಯನ್ನು, ಅದರ ಹಿಂದಿರುವ ಶೋಷಣೆ, ಅಜ್ಞಾನ, ಮೂಢನಂಬಿಕೆಗಳನ್ನು ಗುರುತಿಸಲಾಗಿದೆ. ಒಂದು ಕೃತಿಯ ಯಶಸ್ಸಿಗೆ ಕಾರಣವಾದ ತಂತ್ರವಿನ್ಯಾಸ. ಭಾಷೆಯನ್ನು ಲೇಖಕರು ಎಷ್ಟರಮಟ್ಟಿಗೆ ಬಳಸಿಕೊಂಡಿದ್ದಾರೆಂಬುದರ ಪ್ರಸ್ತಾಪದೊಂದಿಗೆ ಅವುಗಳ ಹಿನ್ನೆಲೆಯಲ್ಲಿ ಕಾದಂಬರಿಕಾರರ. ಕಾದಂಬರಿಯ ಧೋರಣೆಯನ್ನು ಗುರುತಿಸಲಾಗಿದೆ.

ಒಟ್ಟಾರೆ ರಾವಬಹದ್ದೂರರ ಗ್ರಾಮಾಯಣ ಕನ್ನಡದ ಶ್ರೇಷ್ಠ ಕಾದಂಬರಿಗಳಲ್ಲೊಂದು ಶಾಂತಿ. ಸಂತೃಪ್ತಿ. ಶ್ರದ್ಧೆಗಳ ಬೀಡಾಗಿ ಬಾಳುತ್ತಿದ್ದ ಹಳ್ಳಿಯೊಂದು ಸ್ವಾರ್ಥ ಪಿಶಾಚಿಗಳ ಕುಟಿಲ ಕಾರಸ್ಥಾನದಿಂದ ನರಕ ಸದೃಶವಾದ ದುರಂತದ ಚಿತ್ರಣ ನೀಡುವ ಗಂಭೀರ ಕೃತಿಯಿದು. ಫ್ಯೂಡಲಿಸ್ಟಿಕ್ ಸಮಾಜದಲ್ಲಿ ಅಂತರ್ಗತವಾಗಿರುವ ಅನೈತಿಕತೆಯಿಂದಲೇ ಛಿದ್ರವಾಗುವುದನ್ನು ಈ ಕೃತಿ ಎತ್ತಿಹಿಡಿಯುವಲ್ಲಿ ಸಫಲವಾಗಿದೆ. ಅದರ ಜೊತೆಗೆ ಜೀವದಿಂದ ಕಳಕಳಿಸುವ ಪ್ರಾದೇಶಿಕತೆ. ಬಹುಸಂಖ್ಯೆಯ ಪಾತ್ರಗಳಿಂದ ತುಂಬಿದ್ದರೂ ಅವುಗಳಲ್ಲಿರುವ ಅನನ್ಯ ವಿಶಿಷ್ಟತೆ. ಸಂಕೀರ್ಣವೂ. ಸುಬದ್ಧವೂ. ಸಮರ್ಥವೂ ಆದ ಕಥಾಸಂವಿಧಾನ, ವಿಶಿಷ್ಟವಾದ ಆಡುನುಡಿಗಳಿಂದ ತುಂಬಿದ ಧ್ವನಿಪೂರ್ಣ ಸಂಭಾಷಣೆ. ಅನುಭವ ಶ್ರೀಮಂತಿಕೆ. ಬೌದ್ಧಿಕತೆಯ ಹೊಳಪು ಮತ್ತು ಅನಿವಾರ್ಯವಾದ ಸಹಜ ದುರಂತ ಇವು ಈ ಕಾದಂಬರಿಯ ಕಲಾತ್ಮಕ ಔನ್ನತ್ಯಕ್ಕೆ ಮೂಲ ಕಾರಣಗಳಾಗಿವೆ.

ಇಷ್ಟಾಗಿಯೂ. ಈ ಅಧ್ಯಯನ ಅಂತಿಮವಲ್ಲ ಎಂಬುದು ತಿಳಿದಿರಬೇಕಾದ ವಿಚಾರ. ರಾವಬಹದ್ದೂರರ ಪ್ರತಿಭೆಯ ಸೃಷ್ಟಿ ಅದರ ಅಧ್ಯಯನಕ್ಕೆ ಅಂತಿಮ ತೆರೆಯನ್ನು ಎಳೆಯಲಾರದು ಎಂಬುದು ಬಹುಶಃ ಎಲ್ಲರೂ ಒಪ್ಪಿಕೊಳ್ಳುವ ಸಂಗತಿ ಎಂದುಕೊಂಡಿದ್ದೇನೆ.

# ಆಕರ ಗ್ರಂಥಗಳು

೧. ರಾವಬಹದ್ದೂರ : ಗ್ರಾಮಾಯಣ
ಅಂಕಿತ ಪ್ರಕಾಶನ
ಬಸವನಗುಡಿ, ಬೆಂಗಳೂರು-೨೦೦೦.

೨. ರಾವಬಹದ್ದೂರ : ಮರೆಯದ ನೆನಪುಗಳು
ಉಷಾ ಸಾಹಿತ್ಯ ಮಾಲೆ
ಚಂದ್ರಗುಪ್ತ ರಸ್ತೆ, ಮೈಸೂರು.
೧೯೮೪

# ಪರಾಮರ್ಶನ ಗ್ರಂಥಗಳು

೧. ಆಮೂರ.ಜಿ.ಎಸ್. : ಕನ್ನಡ ಕಾದಂಬರಿಗಳ ಬೆಳವಣಿಗೆ
ಬೆಂಗಳೂರು ವಿಶ್ವವಿದ್ಯಾನಿಲಯ.
ಬೆಂಗಳೂರು-೧೯೮೩

೨. ಆಮೂರ.ಜಿ.ಎಸ್. : ಕನ್ನಡ ಕಥನ ಸಾಹಿತ್ಯ : ಕಾದಂಬರಿ
(ವಿಸ್ತೃತ, ಪರಿಷ್ಕೃತ ಆವೃತ್ತಿ)
ಸಪ್ನ ಬುಕ್ ಹೌಸ್
೩ನೇ, ಮುಖ್ಯರಸ್ತೆ, ಗಾಂಧಿನಗರ.
ಬೆಂಗಳೂರು-೯. ೨೦೦೬

೩. ಕೀರ್ತಿನಾಥ ಕುರ್ತಕೋಟಿ : ಯುಗಧರ್ಮ ಮತ್ತು ಸಾಹಿತ್ಯದರ್ಶನ
ಮನೋಹರ ಗ್ರಂಥಮಾಲೆ
ಧಾರವಾಡ, ೧೯೬೨

೪. ಕೀರ್ತಿನಾಥ ಕುರ್ತಕೋಟಿ : ವಿಮರ್ಶೆಯ ವಿನಯ ಕಾದಂಬರಿ
ಮನೋಹರ ಗ್ರಂಥಮಾಲೆ
ಧಾರವಾಡ ೧೯೯೬

೫. ಕೃಷ್ಣ ಆಲನಹಳ್ಳಿ (ಸಂ) : ಗ್ರಾಮಾಯಣ ಸಮೀಕ್ಷೆ
ಪ್ರಕಾಶನ, ಮೈಸೂರು ೧೯೩೦

೬. ಕೋದಂಡರಾಮು.ಎನ್.ಕೆ. : ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ
ಗಾಯತ್ರಿ ಸ್ಮಾರಕ ಗ್ರಂಥಮಾಲೆ.
ಜೋಗಾಟಿ. ಮೈಸೂರು. ೧೯೯೬

೭. ಗಿರಡ್ಡಿ ಗೋವಿಂದರಾಜ : ಕಾದಂಬರಿ ವಸ್ತು ಮತ್ತು ತಂತ್ರ
ಸ್ನೇಹ ಪ್ರಕಾಶನ
ಮಂಗಳೂರು. ೧೯೮೭

೮. ಚನ್ನಪ್ಪ.ಎಸ್. : ಕನ್ನಡದ ಹತ್ತು ಪ್ರತಿಭೆಗಳು
ಅರ್ಕಾವತಿ ಪ್ರಕಾಶನ. ಮೈಸೂರು.
೧೯೯೨

೯. ಜೋರಲಿಂಗಯ್ಯ.ಎನ್ : ಕಾನೂರು ಹೆಗ್ಗಡತಿ: ವಿವೇಚನೆ
ಪೃಥ್ವೀ ಪ್ರಕಾಶನ. ಮೈಸೂರು-೫
೧೯೭೨

೧೦. ರಘುನಾಥರಾವ್.ಡಿ : ರಾವ್‌ಬಹದ್ದೂರ್ ಗ್ರಾಮಾಯಣ.
(ವಿಮರ್ಶಾ ಲೇಖನ)

೧೧. ರಾಜಪ್ಪ ದಳವಾಯಿ (ಸಂ) : ಕನ್ನಡ ಸಾಹಿತ್ಯ ಕೋಶ- ಸಂಪುಟ-೧
ಕದಿರು ಪ್ರಕಾಶನ
ಟಿ.ಕೆ.ಲೇಔಟ್, ಮೈಸೂರು. ೨೦೦೦.

೧೨. ಶಿವರುದ್ರಪ್ಪ.ಜಿ.ಎಸ್. : ಸಮಗ್ರ ಗದ್ಯ ಸಂಪುಟ-೨
ಪ್ರಿಯದರ್ಶಿನಿ ಪ್ರಕಾಶನ
ಬೆಂಗಳೂರು-೨೦೦೩.

೧೩. ಶೇಷಗಿರಿರಾವ್.ಎಲ್.ಎಸ್. : ಹೊಸಗನ್ನಡ ಸಾಹಿತ್ಯ ಚರಿತ್ರೆ
ಅಂಕಿತ ಪುಸ್ತಕ
ಬಸವನಗುಡಿ, ಬೆಂಗಳೂರು-೨೦೦೬

೧೪. ಸುಮತೀಂದ್ರನಾಡಿಗ : ವಿಮರ್ಶೆಯ ದಾರಿಯಲ್ಲಿ
ಕರ್ನಾಟಕ ಬುಕ್ ಏಜೆನ್ಸಿ,
ಗಾಂಧಿನಗರ, ಬೆಂಗಳೂರು.

೧೫. ವಿಶ್ವಕೋಶ : ಕನ್ನಡ ವಿಷಯ ವಿಶ್ವಕೋಶ
ಸಂಪುಟ-೨
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ.
ಮೈಸೂರು ವಿಶ್ವವಿದ್ಯಾನಿಲಯ.
೨೦೦೩.